

# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ



# Karnataka Scout & Guide

*Monthly News Magazine*

Vol-14 | August - 2016 | Issue No. 08 | ₹ 10/-


## Birth Centenary Celebration of Late V.P. Deenadayalu Naidu




Sri B.N. Manjunath Reddy, Mayor, BBMP Inaugurated the Birth centenary Celebrations of Late V.P. Deenadayalu Naidu and Sri P.C. Mohan M.P released the Booklet on the life of Sri V.P. Denadayalu Naidu on 16th August 2016 at Bengaluru

The dignitaries from Left to Right Sri D. Venkatesh s/o Late V.P. Deenadayalu Naidu, Sri M. Anand, Leader JD(S), Dr. Go.Ru Chennabasappa, Sri R.S. Satyanarayana, leader Ruling Party, Sri B.N. Manjunatha Reddy, Mayor, B.B.M.P, Dr. M.R. Jayaram, Chairman, Deenadayalu Naidu Centenary Celebration Committee, Sri P.C. Mohan, M.P, Smt. S.P. Hemalatha, Dy. Mayor, B.B.M.P & Sri P.G.R. Sindhia, State Chief Commissioner.




Malnad Open Scout Group, Shivamogga District Organised a programme "Geet Bharathi" on the occasion of Independence Day Celebration on 06th August 2016. A Group of Children singing a patriotic song on the occasion. Sri Digendra Kumar, Nayak (Rtd.), Ex Army Man and Mahavira chakra Awardee was felicitated on the occassion.

# 70ನೇ ಸ್ವಾತಂತ್ರ್ಯೋತ್ಸವ ಕಾರ್ಯಕ್ರಮದ ಪಥಚಲನದಲ್ಲಿ ಸ್ಕೌಟ್ಸ್-ಗೈಡ್ಸ್ ತಂಡಗಳು ಭಾಗವಹಿಸಿ ಬಹುಮಾನಗಳನ್ನು ಪಡೆದಿರುವ ವಿವಿಧ ಜಿಲ್ಲೆಗಳ ವಿಹಂಗಮ ನೋಟ



ಗದಗ - ಪ್ರಥಮ ಸ್ಥಾನ
ಶ್ರೀ ಹೆಚ್.ಕೆ. ಪಾಟೀಲ್, ಮಾನ್ಯ ಗ್ರಾಮೀಣಾಭಿವೃದ್ಧಿ ಹಾಗೂ ಪಂಚಾಯತ್‌ರಾಜ್ ಸಚಿವರಿಂದ ಪ್ರಶಸ್ತಿ ಸ್ವೀಕರಿಸುತ್ತಿರುವುದು



ಚಿಕ್ಕಮಗಳೂರು - ಪ್ರಥಮ ಸ್ಥಾನ
ಡಾ. ಜಿ. ಪರಮೇಶ್ವರ, ಮಾನ್ಯ ಗೃಹಸಚಿವರಿಂದ ಪ್ರಶಸ್ತಿ ಸ್ವೀಕರಿಸುತ್ತಿರುವುದು



ಮಂಡ್ಯ - ಪ್ರಥಮ ಸ್ಥಾನ
ಶ್ರೀ ಡಿ.ಕೆ. ಶಿವಕುಮಾರ್, ಮಾನ್ಯ ಇಂಧನ ಖಾತೆ ಸಚಿವರಿಂದ ಪ್ರಶಸ್ತಿ ಸ್ವೀಕರಿಸುತ್ತಿರುವುದು



ರಾಯಚೂರು - ಪ್ರಥಮ ಸ್ಥಾನ
ಶ್ರೀ ತನ್ವೀರ್ ಸೇಠ್, ಮಾನ್ಯ ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ಸಚಿವರಿಂದ ಪ್ರಶಸ್ತಿ ಸ್ವೀಕರಿಸುತ್ತಿರುವುದು





ಪ್ರಥಮ ಸ್ಥಾನ ತುಮಕೂರು ದ್ವಿತೀಯ ಸ್ಥಾನ
ಶ್ರೀ ಟಿ.ಬಿ. ಜಯಚಂದ್ರ, ಮಾನ್ಯ ಕಾನೂನು ಹಾಗೂ ಸಂಸದೀಯ ವ್ಯವಹಾರಗಳ ಸಚಿವರಿಂದ ಪ್ರಶಸ್ತಿ ಸ್ವೀಕರಿಸುತ್ತಿರುವುದು

# 70ನೇ ಸ್ವಾತಂತ್ರ್ಯೋತ್ಸವ ಕಾರ್ಯಕ್ರಮದ ಪಥಚಲನದಲ್ಲಿ ಸ್ಕೌಟ್ಸ್-ಗೈಡ್ಸ್ ತಂಡಗಳು ಭಾಗವಹಿಸಿ ಬಹುಮಾನಗಳನ್ನು ಪಡೆದಿರುವ ವಿವಿಧ ಜಿಲ್ಲೆಗಳ ವಿಹಂಗಮ ನೋಟ





ಪ್ರಥಮ ಸ್ಥಾನ ಉಡುಪಿ ದ್ವಿತೀಯ ಸ್ಥಾನ

ಶ್ರೀ ಪ್ರಮೋದ್ ಮಧ್ವರಾಜ್, ಮಾನ್ಯ ಮೀನುಗಾರಿಕೆ, ಯುವಜನ ಸೇವೆ ಮತ್ತು ಕ್ರೀಡಾ ಸಚಿವರಿಂದ ಪ್ರಶಸ್ತಿ ಸ್ವೀಕರಿಸುತ್ತಿರುವುದು





ಪ್ರಥಮ ಸ್ಥಾನ ಹಾವೇರಿ ದ್ವಿತೀಯ ಸ್ಥಾನ

ಶ್ರೀ ರುದ್ರಪ್ಪ ಲಮಾಣಿ, ಮಾನ್ಯ ಮುಜರಾಯಿ ಹಾಗೂ ಜವಳಿ ಖಾತೆ ರಾಜ್ಯ ಸಚಿವರಿಂದ ಪ್ರಶಸ್ತಿ ಸ್ವೀಕರಿಸುತ್ತಿರುವುದು




ಬೀದರ್ - ಪ್ರಥಮ ಸ್ಥಾನ

ಶ್ರೀ ಈಶ್ವರ್ ಖಂಡ್ರೆ, ಮಾನ್ಯ ಪೌರಾಡಳಿತ ಸಚಿವರಿಂದ ಪ್ರಶಸ್ತಿ ಸ್ವೀಕರಿಸುತ್ತಿರುವುದು



ಕೊಡಗು - ಪ್ರಥಮ ಸ್ಥಾನ

ಶ್ರೀ ಸೀತಾರಾಮ್, ಮಾನ್ಯ ಯೋಜನೆ, ಸಾಂಖ್ಯಿಕ, ಮಾಹಿತಿ ಮತ್ತು ತಂತ್ರಜ್ಞಾನ ಸಚಿವರಿಂದ ಪ್ರಶಸ್ತಿ ಸ್ವೀಕರಿಸುತ್ತಿರುವುದು

# 70ನೇ ಸ್ವಾತಂತ್ರ್ಯೋತ್ಸವ ಕಾರ್ಯಕ್ರಮದ ಪಥಚಲನದಲ್ಲಿ ಸ್ಕೌಟ್ಸ್-ಗೈಡ್ಸ್ ತಂಡಗಳು ಭಾಗವಹಿಸಿ ಬಹುಮಾನಗಳನ್ನು ಪಡೆದಿರುವ ವಿವಿಧ ಜಿಲ್ಲೆಗಳ ವಿಹಂಗಮ ನೋಟ




**ಕೊಪ್ಪಳ - ದ್ವಿತೀಯ ಸ್ಥಾನ**
ಶ್ರೀ ಬಸವರಾಜ ರಾಯರೆಡ್ಡಿ, ಮಾನ್ಯ ಉನ್ನತ ಶಿಕ್ಷಣ ಸಚಿವರಿಂದ ಪ್ರಶಸ್ತಿ ಸ್ವೀಕರಿಸುತ್ತಿರುವುದು



**ಬೆಳಗಾವಿ - ಪ್ರಥಮ ಸ್ಥಾನ**
ಶ್ರೀಮತಿ ರಾಜಶ್ರೀ ಜೈನಾಪುರ, ಬೆಳಗಾವಿ ಉಪವಿಭಾಗಾಧಿಕಾರಿಗಳು ಪ್ರಶಸ್ತಿ ನೀಡುತ್ತಿರುವುದು.




**ದಾವಣಗೆರೆ - ಪ್ರಥಮ ಸ್ಥಾನ**
ಶ್ರೀ ಮಂಜುನಾಥ್ ಬಳ್ಳಾರಿ, ತಹಶೀಲ್ದಾರ್ ಇವರು ಪ್ರಶಸ್ತಿ ನೀಡುತ್ತಿರುವುದು.

## 70ನೇ ಸ್ವಾತಂತ್ರ್ಯೋತ್ಸವ ಕಾರ್ಯಕ್ರಮದ ಪಥಚಲನದಲ್ಲಿ ಸ್ಕೌಟ್ಸ್-ಗೈಡ್ಸ್ ತಂಡಗಳು ಭಾಗವಹಿಸಿರುವುದು




ಶ್ರೀ ಕೆ.ಆರ್. ರಮೇಶ್ ಕುಮಾರ್, ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು ರೇಂಜರ್ಸ್‌ಗಳಿಂದ ವಂದನೆ ಸ್ವೀಕರಿಸುತ್ತಿರುವುದು




ಶ್ರೀ ಎಂ.ಬಿ. ಪಾಟೀಲ, ಮಾನ್ಯ ಜಲ ಸಂಪನ್ಮೂಲ ಸಚಿವರು ಗೈಡ್ಸ್‌ಗಳಿಂದ ವಂದನೆ ಸ್ವೀಕರಿಸುತ್ತಿರುವುದು




ಶ್ರೀ ಶರಣ ಪ್ರಕಾಶ್ ಪಾಟೀಲ್, ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರು ಗೈಡ್ಸ್‌ಗಳಿಂದ ವಂದನೆ ಸ್ವೀಕರಿಸುತ್ತಿರುವುದು

ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಿಕ ವಾರ್ತಾಪತ್ರಿಕೆ

*Karnataka Scout & Guide*

*Monthly News Magazine*



**ಪರಿವಿಡಿ**

* ರಾಜ್ಯ ಮುಖ್ಯ ಆಯುಕ್ತರ ನುಡಿ
* ರಾಜ್ಯ ವಾರ್ತೆಗಳು
  - ದಿ॥ ವಿ.ಪಿ. ದೀನದಯಾಳು ನಾಯ್ಡು ಜನ್ಮ ಶತಮಾನೋತ್ಸವ
  - ವಿ.ಪಿ. ದೀನದಯಾಳು ನಾಯ್ಡು ಅವರ ಒಂದು ನೆನಪು
  - Visit of Chief National Commissioner Sri B.I. Nagarale, I.A.S (Retd)
  - ದಿ. ರಾಜೀವ್ ಗಾಂಧಿಅವರ ಜನ್ಮ ದಿನೋತ್ಸವ
  - ರಾಜ್ಯ ಕೇಂದ್ರ ಕಛೇರಿಯಲ್ಲಿ 70ನೇ ಸ್ವಾತಂತ್ರ್ಯ ದಿನಾಚರಣೆ
  - ಹ್ಯಾಮ್ ರೇಡಿಯೋ ತರಬೇತಿ
  - ರಾಜ್ಯ ಮಟ್ಟದ ದಳ ನಾಯಕರ ತರಬೇತಿ ಶಿಬಿರಗಳು
  - ರಾಜ್ಯ ಪುರಸ್ಕಾರ ಸ್ಕೌಟ್ಸ್ ರೋವರ್ಸ್ ಮತ್ತು ರೇಂಜರ್ಸ್ ಪರೀಕ್ಷಾ ಶಿಬಿರ
  - ವಿಪತ್ತು ನಿರ್ವಹಣಾ ತರಬೇತಿ ಶಬಿರಿ
* ಜಿಲ್ಲಾ ವಾರ್ತೆಗಳು




**ಸಂಚಿಕೆಯ ವಾರ್ಷಿಕ ಚಂದಾ ರೂ. 100 /-**
**ವಿದ್ಯಾಸಂಸ್ಥೆ ಹಾಗೂ ಸಂಘಸಂಸ್ಥೆಗಳಿಗೆ**
**ವಾರ್ಷಿಕ ಚಂದಾ ರೂ. 100 /-** ಚಂದಾಹಣವನ್ನು
ಸಂಪಾದಕರು, ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ
ರಾಜ್ಯ ಕೇಂದ್ರ ಕಛೇರಿ, ಶಾಂತಿಗೃಹ # 39
ಅರಮನೆ ರಸ್ತೆ, ಬೆಂಗಳೂರು-560 001
ದೂ: 080-2226 0017, 2226 7470
ಇಲ್ಲಿಗೆ ಕಳುಹಿಸಲು ಕೋರಿದೆ.

ನಮ್ಮ ಸಂಸ್ಥೆಯ ವೆಬ್‌ಸೈಟ್
**www.bsgkarnataka.org**
**www.kondajjibasappa.org**
**www.kondajjibasappa.com**

ನಮ್ಮ ಸಂಸ್ಥೆಯ ಫೇಸ್‌ಬುಕ್
**The Bharat Scouts-Guides Karnataka**



# ರಾಜ್ಯ ಮುಖ್ಯ ಆಯುಕ್ತರ ನುಡಿ

ಪ್ರಿಯ ಓದುಗ ಬಂಧುಗಳೇ

ಸಸ್ನೇಹ ನಮಸ್ಕಾರಗಳು

ನಿಮಗೆಲ್ಲರಿಗೂ ಭಾರತದ ಎಪ್ಪತ್ತನೆಯ ಸ್ವಾತಂತ್ರ್ಯ ದಿನೋತ್ಸವದ ಹಾರ್ದಿಕ ಶುಭಾಶಯಗಳು. ಶತಮಾನಗಳ ತ್ಯಾಗ, ಬಲಿದಾನ ಮತ್ತು ಅದಮ್ಯ ದೇಶಪ್ರೇಮದ ರೂಪಕವಾಗಿ 1947 ರ ಆಗಸ್ಟ್ 15ನೇ ತಾರೀಖು ನಮ್ಮ ಅಭಿಮಾನದ ತ್ರಿವರ್ಣ ಧ್ವಜವು ನವದೆಹಲಿಯ ಐತಿಹಾಸಿಕ ಕೆಂಪು ಕೋಟೆಯ ಮೇಲೆ ವಿಜೃಂಭಿಸಿತು. ಸಾಂಸ್ಕೃತಿಕವಾಗಿ, ಧಾರ್ಮಿಕವಾಗಿ, ವಿಭಿನ್ನತೆಯಲ್ಲಿ ಏಕವಾಗಿದ್ದರೂ ರಾಜಕೀಯವಾಗಿ ನೂರಾರು ರಾಜ್ಯಗಳು, ಸಂಸ್ಥಾನಗಳು, ಪಾಳೆಯಪಟ್ಟುಗಳಾಗಿ ಒಡೆದು ಹೋಗಿದ್ದ ಭಾರತವು ಐಕ್ಯ ಸ್ವತಂತ್ರ ಸಾರ್ವಭೌಮ ರಾಷ್ಟ್ರವಾಗಿ ಹೊಮ್ಮಿದ್ದು ಪ್ರಪಂಚದ ಇತಿಹಾಸದಲ್ಲಿ ಒಂದು ಅಪೂರ್ವ ಘಟನೆ.

ಕ್ರಿ.ಶ 1600 ರಲ್ಲಿ ವ್ಯಾಪಾರಕ್ಕಾಗಿ ಈಸ್ಟ್ ಇಂಡಿಯಾ ಕಂಪನಿಯ ಮೂಲಕ ಭಾರತಕ್ಕೆ ಬಂದ ಬ್ರಿಟೀಷರು, ಅಂದಿನ ರಾಜರುಗಳಲ್ಲಿ, ಆಡಳಿತಗಾರರಲ್ಲಿ ಇದ್ದ ಒಳಜಗಳ ಅನೈಕ್ಯತೆ ಮತ್ತು ಅದೂರ ದೃಷ್ಟಿಯ ಲಾಭ ಪಡೆದು ಇಲ್ಲಿ ತಮ್ಮ ಸಾಮ್ರಾಜ್ಯವನ್ನು ಕಟ್ಟಿದ್ದು ನಮ್ಮ ಇತಿಹಾಸದ ದುರಂತ ಅಧ್ಯಾಯವಾಗಿದೆ. ಕಿತ್ತೂರು ರಾಣಿ ಚೆನ್ನಮ್ಮನ ಆದಿಯಾಗಿ ಕಟ್ಟಕಡೆಯ ಸ್ವಾತಂತ್ರ್ಯ ಹೋರಾಟಗಾರರು ಈ ದುರಂತವನ್ನು ಸರಿಪಡಿಸುವುದಕ್ಕಾಗಿ ತಮ್ಮ ಬದುಕನ್ನು ಪಣವಾಗಿಟ್ಟು ಹೋರಾಡಿದರು. 1857ರ ಪ್ರಥಮ ಸ್ವಾತಂತ್ರ್ಯ ಸಂಗ್ರಾಮವು ನಿರೀಕ್ಷಿತ ಯಶಸ್ಸನ್ನು ಗಳಿಸಲಿಲ್ಲ. 1885ರಲ್ಲಿ ಆರಂಭವಾದ ಭಾರತದ ರಾಷ್ಟ್ರೀಯ ಕಾಂಗ್ರೆಸ್, ಜನಸಾಮಾನ್ಯರನ್ನು ಸಂಘಟಿಸಿ, ಅವರನ್ನು ಸ್ವಾತಂತ್ರ್ಯ ಹೋರಾಟಕ್ಕಾಗಿ ಸಜ್ಜುಗೊಳಿಸತೊಡಗಿತು. **"ಸ್ವರಾಜ್ಯ ನನ್ನ ಜನ್ಮ ಸಿದ್ದ ಹಕ್ಕು"** ಎಂದು ಘೋಷಿಸಿದ ಬಾಲಗಂಗಾಧರ ತಿಲಕ್, ಸೌಮ್ಯವಾದಿ ನಾಯಕ ಗೋಪಾಲಕೃಷ್ಣ ಗೋಖಲೆ ಮೊದಲಾದವರು ಹೋರಾಟದ ಭದ್ರ ಬುನಾದಿಯನ್ನು ಹಾಕಿದರು. ಸ್ವಾತಂತ್ರ್ಯ ಹೋರಾಟಕ್ಕೆ ಮಹಾತ್ಮ ಗಾಂಧೀಜಿಯವರು ಧುಮುಕಿದ ಮೇಲೆ ಅದರ ದಿಕ್ಕು ಬದಲಾವಣೆಯಾಯಿತು. ಅಹಿಂಸೆ ಮತ್ತು ಸತ್ಯಾಗ್ರಹವನ್ನು ತಮ್ಮ ಅಸ್ತ್ರವನ್ನಾಗಿ ಮಾಡಿಕೊಂಡ ಗಾಂಧೀಜಿ ಹೋರಾಟದ ಜೊತೆ ಜೊತೆಗೆ ನಮ್ಮ ಸಮಾಜದ ಅಸಮಾನತೆಗಳನ್ನು ತೊಡೆಯುವುದಕ್ಕೆ ಪ್ರಯತ್ನಿಸಿದರು. ಪಂಡಿತ್ ಜವಹಾರ್ ಲಾಲ್ ನೆಹರು, ನೇತಾಜಿ ಸುಭಾಷ್ ಚಂದ್ರ ಬೋಸ್, ಮೊದಲಾದವರು ಹೋರಾಟದ ಪ್ರತೀಕವಾದರು. ಕಾಂಗ್ರೆಸ್ಸಿಗಿಂತ ವಿಭಿನ್ನ ಹಾದಿಯನ್ನು ತುಳಿದ ಭಗತ್ ಸಿಂಗ್, ಚಂದ್ರಶೇಖರ್ ಅಜಾದ್ ಮುಂತಾದ ಕ್ರಾಂತಿಕಾರಿಗಳು ಹೋರಾಟದ ಕಿಚ್ಚಿನ ರೂಪವಾದರು.

ಸ್ವಾತಂತ್ರ್ಯಾನಂತರ ನಮಗೆ ನಾವೇ ಕೊಟ್ಟುಕೊಂಡ ಭಾರತೀಯ ಸಂವಿಧಾನವು ವಿಶ್ವದಲ್ಲಿಯೇ ಅತಿವಿಶಿಷ್ಟವಾದ ಪ್ರಯೋಗವಾಗಿದೆ. ಡಾ|| ಬಿ.ಆರ್. ಅಂಬೇಡ್ಕರ್ ಅವರು ಸಂವಿಧಾನ ರಚನಾ ಸಮಿತಿಯ ಅಧ್ಯಕ್ಷರಾಗಿ ಸುತ್ತ್ಯಾರ್ಹವಾದ ಕೆಲಸವನ್ನು ಮಾಡಿದ್ದಾರೆ.ಸಾವಿರಾರು ಭಾಷೆ, ಹತ್ತಾರು ಮತಗಳು, ನೂರಾರು ಬುಡಕಟ್ಟುಗಳು ಲೆಕ್ಕವಿಲ್ಲದಷ್ಟು ಜಾತಿ ವರ್ಗಗಳು, ಪುರುಷ, ಸ್ತ್ರೀ ಎಂದು ಒಡೆದು ಹೋಗಿದ್ದ. ನಮ್ಮ ಸಮಾಜವನ್ನು ಒಂದು ಧಾರೆಯಲ್ಲಿ ಹೆಣೆದು, ಪ್ರಗತಿಪಥದಲ್ಲಿ ಕೊಂಡೊಯ್ಯಲು ಸಂವಿಧಾನವು ನಮಗೆ ಅನುವು ಮಾಡಿಕೊಟ್ಟಿದೆ. ಪ್ರತಿ ವ್ಯಕ್ತಿ, ಪ್ರತಿ ಘಟನೆಗಳಲ್ಲಿ ಸಂವಿಧಾನವು ಸ್ಪಂದಿಸುತ್ತಿದೆ. ಸರ್ವಸಮಾನತೆಯ ಆಧಾರದ ಮೇಲೆ ಸ್ವತಂತ್ರ, ಧರ್ಮನಿರಪೇಕ್ಷ, ಸಮಾಜವಾದಿ, ಪ್ರಜಾತಂತ್ರವು ನಮ್ಮದು ಎಂಬುವುದು ಹೆಮ್ಮೆಯ ವಿಷಯ. ಕಳೆದ ಎಪ್ಪತ್ತು ವರ್ಷಗಳಲ್ಲಿ ನಾವು ಒಂದು ಸಮರ್ಥ ರಾಷ್ಟ್ರವಾಗಿ ರೂಪುಗೊಂಡಿದ್ದೇವೆ. ಇದನ್ನು ಉಳಿಸುವ, ಬೆಳೆಸುವ ಜವಾಬ್ದಾರಿಯು ನಮ್ಮೆಲ್ಲರದಾಗಿದೆ. ವಿಶೇಷವಾಗಿ ಸೇವಾ ಧರ್ಮವನ್ನು ಒಪ್ಪಿಕೊಂಡು ಸ್ಕೌಟ್ಸ್ ಮತ್ತು ಗೈಡ್ಸ್ ಸಮಾಜದಲ್ಲಿ ಸಾಮರಸ್ಯ ಸಮಾನತೆ ಮತ್ತು ವೈಜ್ಞಾನಿಕ ಮನೋಧರ್ಮವನ್ನು ಮೂಡಿಸುವ ಜವಾಬ್ದಾರಿಯನ್ನು ಹೊಂದಿದೆ.

ಸ್ವಾತಂತ್ರ್ಯ ದಿನೋತ್ಸವವನ್ನು ನಮ್ಮ ರಾಜ್ಯ, ಜಿಲ್ಲಾ, ತಾಲ್ಲೂಕು, ಮತ್ತು ಸ್ಥಳೀಯ ಘಟಕಗಳು ವಿಜೃಂಭಣೆಯಿಂದ ಆಚರಿಸಿವೆ. ಎಲ್ಲೆಡೆಯಲ್ಲೂ ಪಥ ಸಂಚಲನದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಉತ್ಸಾಹದಿಂದ ಭಾಗವಹಿಸಿದ್ದಾರೆ. ಚಿಕ್ಕಮಗಳೂರು ಹಾಗೂ ಹಾವೇರಿಯಲ್ಲಿ ನಡೆದ ಪಥ ಸಂಚಲನದಲ್ಲಿ ಪ್ರಥಮ ಹಾಗೂ ದ್ವಿತೀಯ ಬಹುಮಾನಗಳನ್ನು ನಮ್ಮ ಘಟಕಗಳು ಪಡೆದುಕೊಂಡಿವೆ. ಈ ಸಾಧನೆಯನ್ನು ನಾನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ. ಅನಾಥಾಶ್ರಮಗಳಿಗೆ ಭೇಟಿ ಕೊಡುವುದು, ಕೋಟಿವೃಕ್ಷ ಆಂದೋಲನದಲ್ಲಿ ಭಾಗವಹಿಸುವುದು, ಸ್ವಚ್ಛ ಭಾರತ ಅಭಿಯಾನದಲ್ಲಿ ತೊಡಗಿಕೊಳ್ಳುವುದು ಮುಂತಾದುವುಗಳಲ್ಲಿ ನಮ್ಮ ಮಕ್ಕಳು ಕ್ರೀಯಾಶೀಲವಾಗಿ ಭಾಗವಹಿಸಿದ್ದಾರೆ. ಭವಿಷ್ಯ ಭಾರತದ ಸತ್ಪ್ರಜೆಗಳಾಗಿ ರೂಪುಗೊಳ್ಳುತ್ತಿದ್ದಾರೆ. ಮಕ್ಕಳಿಗೆ ತರಬೇತಿ ನೀಡುತ್ತಿರುವ ನಮ್ಮ ಪದಾಧಿಕಾರಿಗಳು ಮತ್ತು ಶಿಕ್ಷಕ ವೃಂದವನ್ನು ನಾನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ.

ದಿನಾಂಕ 6.08.2016 ರಂದು ಶಿವಮೊಗ್ಗದ **"ಮಲ್ನಾಡ್ ಓಪನ್ ಗ್ರೂಪ್"**ನವರು ಅರ್ಪಿಸಿದ **"ಗೀತ ಭಾರತಿ"** (ತಾಯಿ ಭಾರತಿಗೆ ಗೀತೆಗಳ ಆರತಿ) ಕಾರ್ಯಕ್ರಮವು ಬಹಳ ಭಾವಪೂರ್ಣವಾಗಿತ್ತು. ವಿವಿಧ ಶಾಲೆಗಳ ಸಹಕಾರದಿಂದ ನಡೆದ ಈ ಕಾರ್ಯಕ್ರಮದಲ್ಲಿ ನಾನು ಭಾಗವಹಿಸಿದ್ದು ಅದೃಷ್ಟವೆಂದೇ ತಿಳಿಯುತ್ತೇನೆ. ಕಾರ್ಗಿಲ್ ಯುದ್ಧದಲ್ಲಿ ಸ್ವತಃ ಭಾಗವಹಿಸಿದ ಮಹಾವೀರ ಚಕ್ರ ಪ್ರಶಸ್ತಿ ಪುರಸ್ಕೃತ ವೀರಯೋಧ ನಿವೃತ್ತ ನಾಯಕ್ ದಿಗೇಂದ್ರ ಕುಮಾರ್ ಅವರು ತಮ್ಮ ಯುದ್ಧದ ಅನುಭವವನ್ನು ನಮ್ಮೊಂದಿಗೆ ಅಂದು ಹಂಚಿಕೊಂಡರು. ಆ ಸಂಜೆಯ ಗೀತ ಭಾರತಿ ಕಾರ್ಯಕ್ರಮದ ಉದ್ಘಾಟನೆಯನ್ನು ಮಾಡಿದರು. ಮನವನ್ನು ಕಲಕಿ ದೇಶ ಭಕ್ತಿಯನ್ನು ಸ್ಫುರಿಸಲು ಕಾರಣವಾದ ಈ ಕಾರ್ಯಕ್ರಮವನ್ನು ಯೋಚಿಸಿ, ಯೋಜಿಸಿ, ನೇರವೇರಿಸಿದ ಮಲ್ನಾಡ್ ಓಪನ್ ಗ್ರೂಪ್ ಸಮಿತಿಯನ್ನು ನಾನು ಅಭಿನಂದಿಸುತ್ತೇನೆ. ಮಾದರಿಯಾದ ಇಂತಹ ಕಾರ್ಯಕ್ರಮಗಳನ್ನು ಎಲ್ಲಾ ಘಟಕಗಳು ರೂಪಿಸಿ ನಡೆಸಬೇಕು.

ಶ್ರೀ ದಿಗೇಂದ್ರ ಕುಮಾರ ಅವರನ್ನು ದಿನಾಂಕ 08.08.2016 ರಂದು ನಮ್ಮ ರಾಜ್ಯ ಮುಖ್ಯ ಕಛೇರಿಯಲ್ಲಿ ಸನ್ಮಾನ ಮಾಡಿದ್ದು ಸ್ಮರಣೀಯ. ಕರ್ನಾಟಕದಲ್ಲಿ ಶ್ರೀ. ಕೊಂಡಜ್ಜಿ ಬಸಪ್ಪನವರ ಜೊತೆಜೊತೆಗೆ ಕೂಡಿ ಸ್ಕೌಟ್ಸ್ ಚಳುವಳಿಯನ್ನು ಕಟ್ಟಿದವರು ದಿವಂಗತ ಶ್ರೀ. ವಿ.ಪಿ.ದೀನದಯಾಳು ನಾಯ್ಡು ಅವರು. 1983 ರಿಂದ 1993 ವರೆಗೆ ಕರ್ನಾಟಕ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಮುಖ್ಯ ಆಯುಕ್ತರಾಗಿ, 1992 ರಿಂದ 1995 ವರೆಗೆ ರಾಷ್ಟ್ರೀಯ ಆಯುಕ್ತರಾಗಿ ಅವರು ಸೇವೆ ಸಲ್ಲಿಸಿದರು. 1986 ರಲ್ಲಿ ಬೆಂಗಳೂರಿನಲ್ಲಿ ಆಯೋಜಿಸಿದ್ದ ಹತ್ತನೇಯ ರಾಷ್ಟ್ರೀಯ ಜಾಂಬೂರಿಯ ರೂವಾರಿ ಅವರು. ಸ್ವಾತಂತ್ರ್ಯ ಹೋರಾಟರಾಗಿ ವಿಧಾನ ಪರಿಷತ್‌ನ, ವಿಧಾನ ಸಭೆಯ ಸದಸ್ಯರಾಗಿ, ಅಂದಿನ ಸಿ.ಐ.ಟಿ.ಬಿ ಅಧ್ಯಕ್ಷರಾಗಿ ಅವರು ಸೇವೆ ಸಲ್ಲಿಸಿದ್ದರು. ಬೆಂಗಳೂರು ಮಹಾನಗರ ಪಾಲಿಕೆಯ ಏಳನೆಯ ಮಹಾಪೌರರಾಗಿ ಸೇವೆ ಸಲ್ಲಿಸಿದ್ದರು. ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಪೂಜ್ಯ ಮೇಯರ್ ಬಿ.ಎನ್. ಮಂಜುನಾಥ್ ರೆಡ್ಡಿ ಅವರ ನೇತೃತ್ವದಲ್ಲಿ ದಿನಾಂಕ 16.08.2016 ರಂದು ಮಹಾನಗರ ಪಾಲಿಕೆಯ ಗಾಜಿನ ಮನೆಯಲ್ಲಿ ಶ್ರೀ ದೀನದಯಾಳು ನಾಯ್ಡು ಅವರ ಜನ್ಮಶತಮಾನೋತ್ಸವ ಕಾರ್ಯಕ್ರಮಗಳನ್ನು ಉದ್ಘಾಟಿಸಲಾಯಿತು. ಕಾರ್ಯಕ್ರಮದಲ್ಲಿ ಜನ್ಮ ಶತಮಾನೋತ್ಸವ ಸಮಿತಿಯ ಅಧ್ಯಕ್ಷರಾದ ಶ್ರೀ.ಎಂ.ಆರ್.ಜಯರಾಮ್, ಸಂಸದ ಶ್ರೀ ಪಿ.ಸಿ.ಮೋಹನ್, ಉಪಮೇಯರ್ ಶ್ರೀಮತಿ ಹೇಮಲತಾ, ಆಡಳಿತ ಪಕ್ಷದ ನಾಯಕರಾದ ಶ್ರೀ ಸತ್ಯನಾರಾಯಣ, ಜೆ.ಡಿ.ಎಸ್. ನಾಯಕ ಶ್ರೀ ಆನಂದ, ಶ್ರೀಮತಿ ಇಂದಿರಾ ದೀನದಯಾಳು ನಾಯ್ಡು ಮತ್ತು ಅವರ ಕುಟುಂಬದ ಸದಸ್ಯರು ಭಾಗವಹಿಸಿದ್ದರು. ಎರಡು ಸಾವಿರಕ್ಕೂ ಮೀರಿ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳು ಬೆಂಗಳೂರು ಉತ್ತರ ಮತ್ತು ದಕ್ಷಿಣ ಜಿಲ್ಲೆಗಳಿಂದ ಆಗಮಿಸಿ ಹಲವಾರು ಸ್ಪರ್ಧೆಗಳಲ್ಲಿ ಭಾಗವಹಿಸಿ ಕಾರ್ಯಕ್ರಮವನ್ನು ಯಶಸ್ವಿಗೊಳಿಸಿದರು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಪರವಾಗಿ ಪೂಜ್ಯ ಮಹಾಪೌರರಿಗೆ ಮತ್ತೆಲ್ಲ ಮುಖಂಡರಿಗೆ ನಾನು ಹೃತ್ಪೂರ್ವಕ ಧನ್ಯವಾದಗಳನ್ನು ಅರ್ಪಿಸುತ್ತೇನೆ. ಶತಮಾನೋತ್ಸವ ಕಾರ್ಯಕ್ರಮವು ವರ್ಷವಿಡೀ ನಡೆಯಲಿದೆ.

ಹದಿನೇಳನೆಯ ರಾಷ್ಟ್ರೀಯ ಜಾಂಬೂರಿಯ ಆಯೋಜನೆಯ ಬಗ್ಗೆ ಕರ್ನಾಟಕ ಸರ್ಕಾರದ ಮುಖ್ಯ ಕಾರ್ಯದರ್ಶಿ ಅವರು ಸಭೆಯೊಂದನ್ನು ಕರೆದಿದ್ದರು. ಇತರ ಪೂರಕ ಸಭೆಗಳು ಸರ್ಕಾರದ ಮಟ್ಟದಲ್ಲಿ ನಡೆಯುತ್ತಿವೆ. ದಿನಾಂಕ 10.08.2016ರಂದು ಮೈಸೂರಿನಲ್ಲಿ ನಮ್ಮ ಕಾರ್ಯಕಾರಿ ಸಮಿತಿಯ ಸಭೆ ನಡೆಯಿತು. ಅಂದು, ಶ್ರೀ ಬಿ.ಐ. ನಗರಾಳೆ, ಮುಖ್ಯ ರಾಷ್ಟ್ರೀಯ ಆಯುಕ್ತರು, ನಾನು ಮತ್ತು ಜಾಂಬೂರಿ ಸಮಿತಿಯ ಪ್ರಧಾನ ಕಾರ್ಯದರ್ಶಿ ಶ್ರೀ.ಪಿ. ವಿಶ್ವನಾಥ ಮತ್ತು ಇತರ ಪದಾಧಿಕಾರಿಗಳು ಮೈಸೂರಿನ ಅಧಿದೇವತೆ ಶ್ರೀ ಚಾಮುಂಡೇಶ್ವರಿ ಅಮ್ಮನವರ ದೇವಸ್ಥಾನಕ್ಕೆ ತೆರಳಿ ಪೂಜೆ ಸಲ್ಲಿಸಿದೆವು. ಹದಿನೇಳನೆಯ ರಾಷ್ಟ್ರೀಯ ಜಾಂಬೂರಿಯು ಯಾವುದೇ ರೀತಿಯ ಅಡೆತಡೆ ಇಲ್ಲದೆ ಯಶಸ್ವಿಯಾಗಲಿ ಪ್ರಾರ್ಥಿಸಿದೆವು.

ಸಮಿತಿಯ ಸಭೆಯಲ್ಲಿ ನಮ್ಮ ಹತ್ತೊಂಭತ್ತು ವಿವಿಧ ಉಪಸಮಿತಿಗಳಲ್ಲಿ ಆದ ನಿರ್ಣಯಗಳನ್ನು ಮಂಡಿಸಿ ಅನುಮೋದನೆ ಪಡೆಯಲಾಯಿತು. ರಾಜ್ಯದ ವಿವಿಧ ಭಾಗಗಳಿಂದ ಸಭೆಗೆ ಆಗಮಿಸಿದ್ದ ಕಾರ್ಯಕಾರಿ ಸಮಿತಿಯ ಸದಸ್ಯರು ಜಾಂಬೂರಿ ನಡೆಯಲಿರುವ ಮೈಸೂರು ನಂಜನಗೂಡು ನಡುವೆ ಇರುವ ಅಡಕನಹಳ್ಳಿ ಕೈಗಾರಿಕಾ ಪ್ರದೇಶಕ್ಕೆ ಭೇಟಿ ಕೊಟ್ಟಿದ್ದರು. ರಾಷ್ಟ್ರೀಯ ಆಯುಕ್ತರಾದ ಶ್ರೀ. ಬಿ.ಐ.ನಗರಾಳೆ ಅವರು ಸಭೆಯಲ್ಲಿ ಭಾಗವಹಿಸಿದರು. ಜಾಂಬೂರಿಯ ಪೂರ್ವಸಿದ್ಧತೆಯು ಸಮರೋಪಾದಿಯಲ್ಲಿ ಆರಂಭವಾಗಿದೆ. ಶ್ರೀ.ಪಿ.ವಿಶ್ವನಾಥ ಮುಖ್ಯ ಆಯುಕ್ತರು ಮೈಸೂರು ಜಿಲ್ಲೆ ಇವರನ್ನು ಜಾಂಬೂರಿ ಸಮಿತಿಯ ಪ್ರಧಾನ ಕಾರ್ಯದರ್ಶಿಯಾಗಿ ನೇಮಕ ಮಾಡಲಾಗಿದೆ. ಶ್ರೀ.ಪಿ.ವಿಶ್ವನಾಥ ಅವರು ಸಮರ್ಥ ವ್ಯಕ್ತಿ, ಜಾಂಬೂರಿ ಸಮಿತಿಯೊಡಗೂಡಿ ಅಚ್ಚುಕಟ್ಟಾಗಿ ಕಾರ್ಯನಿರ್ವಹಣೆ ಮಾಡಬಲ್ಲರು. ನಾವೆಲ್ಲರು ಅವರಿಗೆ ಸಂಪೂರ್ಣ ಸಹಕಾರವನ್ನು ನೀಡಬೇಕು ಮತ್ತು ಎಲ್ಲರು ಒಗ್ಗಟ್ಟಿನಿಂದ ಏಕಮನದಿಂದ ಕೆಲಸದಲ್ಲಿ ತೊಡಗಿಕೊಳ್ಳಬೇಕೆಂದು ಮನವಿ ಮಾಡುತ್ತೇನೆ.

ಹದಿನೇಳನೆಯ ರಾಷ್ಟ್ರೀಯ ಜಾಂಬೂರಿ ಧ್ಯೇಯವಾಕ್ಯ ಈ ರೀತಿ ಇದೆ. **"TOGETHER FOR BETTER TOMORROW"** ಒಗ್ಗಟಿನಿಂದ ನಾಳಿನ ಸುದಿನದೆಡೆಗೆ. ಈ ಧ್ಯೇಯವಾಕ್ಯವನ್ನು ಖ್ಯಾತ ಪರಿಸರವಾದಿ ಶ್ರೀ. ನಾಗೇಶ್ ಹೆಗಡೆ ಅವರು ನೀಡಿದ್ದಾರೆ. ದೇಶದ ಮುಂದಿನ ಭವಿಷ್ಯಕ್ಕಾಗಿ ಎಲ್ಲರೂ ಕೂಡಿ ನಡೆಯುವ ಆಶಯವನ್ನು ಈ ವಾಕ್ಯವು ಸೂಚಿಸುತ್ತವೆ. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಇತರ ಪೂರ್ವನಿಗದಿತ ಕಾರ್ಯಕ್ರಮಗಳಾದ ಶಿಬಿರಗಳು, ತರಬೇತಿಗಳು ಯೋಜಿತ ರೀತಿಯಲ್ಲಿ ನಡೆಯುತ್ತೇವೆ. ಎಲ್ಲಾ ಪದಾಧಿಕಾರಿಗಳು ಕಾರ್ಯಕ್ರಮಗಳ ಯಶಸ್ಸಿಗೆ ಶ್ರಮಿಸುತ್ತಿದ್ದಾರೆ.

ದಿನಾಂಕ 20.08.2016 ರಂದು ದಿವಂಗತ ಪ್ರಧಾನಿ ಶ್ರೀ. ರಾಜೀವ್ ಗಾಂಧಿ ಅವರ ಹುಟ್ಟು ಹಬ್ಬ. ದೇಶಕ್ಕಾಗಿ ಪ್ರಾಣಾರ್ಪಣೆ ಮಾಡಿದ ಆ ದಿವ್ಯಚೇತನದ ಸ್ಮರಣೆಗಾಗಿ ಅಂದು ಸದ್ಭಾವನಾ ದಿನವನ್ನಾಗಿ ಆಚರಿಸಲಾಗುತ್ತಿದೆ. ಬೆಂಗಳೂರು ದಕ್ಷಿಣ ಜಿಲ್ಲೆಯೊಡಗೂಡಿ ರಾಜ್ಯ ಸಂಸ್ಥೆಯು ಬೆಂಗಳೂರಿನ ಐಸಾಕ್ ನ್ಯೂಟನ್ ಶಾಲೆಯಲ್ಲಿ ಸದ್ಭಾವನಾ ದಿನವನ್ನು ಆಚರಿಸಿದೆವು.

ಶ್ರೀಮತಿ ಸರೋಜ.ವಿ.ನಾಯ್ಡು ಅವರು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕದ ಉಪಾಧ್ಯಕ್ಷರಾಗಿದ್ದಾರೆ. ಈ ತಿಂಗಳ ಇಪ್ಪತ್ತನೇಯ ತಾರೀಖು ಅವರಿಗೆ ತೊಂಬತ್ತು ವರ್ಷ. ಶ್ರೀಮತಿ ಸರೋಜ. ವಿ.ನಾಯ್ಡು ಅಭಿನಂದನಾ ಸಮಿತಿಯು ಬೆಂಗಳೂರಿನ ಶಾಂತಿಗೃಹದಲ್ಲಿ ಸಮಾರಂಭವನ್ನು ಏರ್ಪಡಿಸಿದೆ. ದೇಶ ಪ್ರೇಮಿಯೂ, ತ್ಯಾಗಮಯಿಯೂ ಆದ ಶ್ರೀಮತಿ ಸರೋಜ. ವಿ.ನಾಯ್ಡು ಅವರು ಸುಮಾರು 22 ವರ್ಷಗಳಿಂದ ಈ ಚಳವಳಿಯಲ್ಲಿ ಅನುಪಮ ಸೇವೆ ಸಲ್ಲಿಸಿದ್ದಾರೆ. ಆದರ್ಶ ಮಹಿಳೆ ಆದ ಶ್ರೀಮತಿ ಸರೋಜ. ವಿ.ನಾಯ್ಡು ಅವರಿಗೆ ವೈಯಕ್ತಿಕವಾಗಿ ಮತ್ತು ನಮ್ಮ ಸಂಸ್ಥೆಯ ಪರವಾಗಿ ಹೃದಯಪೂರ್ವಕ ಶುಭಾಶಯಗಳು.

ಸೆಪ್ಟೆಂಬರ್ ತಿಂಗಳ ಐದನೇಯ ತಾರೀಕು ಭಾರತದ ಎರಡನೇಯ ರಾಷ್ಟ್ರಪತಿಗಳಾದ ಶ್ರೀಸರ್ವಪಲ್ಲಿ ರಾಧಾಕೃಷ್ಣನ್ (05.09.1888–17.04.1975) ಅವರ ಹುಟ್ಟು ಹಬ್ಬ. ಆದರ್ಶ ಶಿಕ್ಷಕರಾಗಿದ್ದ ಶ್ರೀ ರಾಧಾಕೃಷ್ಣನ್ ಅವರ ಹುಟ್ಟು ಹಬ್ಬವನ್ನು "ಶಿಕ್ಷಕರ ದಿನ" ವನ್ನಾಗಿ ಆಚರಿಸಲಾಗುತ್ತಿದೆ. ಸ್ಕೌಟ್ಸ್ ಮತ್ತು ಗೈಡ್ಸ್ ಚಳುವಳಿಯ ಬೆಳವಣಿಗೆಗೆ ಶಿಕ್ಷಕರು ಅಪಾರ ಕಾಣಿಕೆಯನ್ನು ನೀಡಿದ್ದಾರೆ. ಈ ಸಂದರ್ಭದಲ್ಲಿ ನಾನು ಪ್ರತಿಯೊಬ್ಬ ಶಿಕ್ಷಕರನ್ನು ಸಂತೋಷದಿಂದ ವಿಶ್ವಾಸಪೂರ್ವಕವಾಗಿ ಅಭಿನಂದಿಸುತ್ತೇನೆ. ಮುಂಬರುವ ದಿನಗಳಲ್ಲಿ ಅವರ ಸೇವೆಯು ನಮ್ಮ ಸಂಸ್ಥೆಗೆ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ದೊರೆಯಲೆಂದು ಪ್ರಾರ್ಥಿಸುತ್ತೇನೆ.

ಶ್ರಾವಣ, ಭಾದ್ರಪದ ಮಾಸಗಳು, ಮಳೆ ಮತ್ತು ಹಬ್ಬಗಳ ದಿನಗಳಾಗಿವೆ. ಶ್ರೀ ಕೃಷ್ಣ ಜನ್ಮಾಷ್ಟಮಿ, ಗಣೇಶ ಚತುರ್ಥಿ, ಬಕ್ರೀದ್, ಓಣಂ, ಮುಂತಾದ ಹಬ್ಬಗಳು ಬರಲಿವೆ. ಎಲ್ಲೆಡೆಯು ಸಂತೋಷ, ಸಮೃದ್ಧಿ ಹರಡಲಿ ಮತ್ತು ಎಲ್ಲರಿಗೂ ಶುಭಕಾರ್ಯಗಳಲ್ಲಿ ಯಶಸ್ಸು ದೊರೆಯಲೆಂದು ಹೃತ್ಪೂರ್ವವಾಗಿ ಹಾರೈಸುತ್ತೇನೆ.

**"ಒಗ್ಗಟ್ಟಿನಿಂದ ನಾಳಿನ ಸುದಿನದೆಡೆಗೆ ಹೆಜ್ಜೆ ಹಾಕೋಣ".**

**ಸ್ಕೌಟ್ಸ್ ಮತ್ತು ಗೈಡ್ಸ್ ವಂದನೆಗಳೊಂದಿಗೆ,**

**ತಮ್ಮ ವಿಶ್ವಾಸಿ**

**ಪಿ.ಜಿ.ಆರ್. ಸಿಂಧ್ಯ**

**ರಾಜ್ಯ ಮುಖ್ಯ ಆಯುಕ್ತರು**



# ದಿ|| ವಿ. ಪಿ. ದೀನದಯಾಳು ನಾಯ್ಡು ಜನ್ಮ ಶತಮಾನೋತ್ಸವ

"ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವತಿಯಿಂದ
ಬೆಂಗಳೂರಿನ ಏಳನೇ ಮಹಾಪೌರರು ಹಾಗೂ
ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಷ್ಟ್ರೀಯ ಆಯುಕ್ತರಾದ
"ದಿ|| ವಿ.ಪಿ.ದೀನದಯಾಳು ನಾಯ್ಡುರವರ ಜನ್ಮ ಶತಮಾನೋತ್ಸವ ಉದ್ಘಾಟನಾ ಸಮಾರಂಭ"

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಪೂಜ್ಯ ಮಹಾಪೌರರಾದ ಶ್ರೀ ಬಿ.ಎನ್.ಮಂಜುನಾಥ ರೆಡ್ಡಿರವರು ಬೆಂಗಳೂರಿನ ಏಳನೇ ಮಹಾಪೌರರು ಹಾಗೂ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಷ್ಟ್ರೀಯ ಆಯುಕ್ತರಾಗಿದ್ದ ದಿವಂಗತ ಶ್ರೀ ವಿ.ಪಿ. ದೀನದಯಾಳು ನಾಯ್ಡು, ಅವರ ಜನ್ಮ ಶತಮಾನೋತ್ಸವ ಕಾರ್ಯಕ್ರಮವನ್ನು ದಿನಾಂಕ: 16 ಆಗಸ್ಟ್ 2016 ರಂದು ದೀಪ ಬೆಳಗಿಸಿ ಉದ್ಘಾಟಿಸಿದರು. ಈ ಕಾರ್ಯಕ್ರಮವು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಕೇಂದ್ರ ಕಛೇರಿಯಲ್ಲಿರುವ ಡಾ|| ರಾಜ್‌ಕುಮಾರ್ ಗಾಜಿನ ಮನೆಯಲ್ಲಿ ಜರುಗಿತು. ಪೂಜ್ಯ ಮಹಾಪೌರರು ಸಮಾರಂಭವನ್ನು ಉದ್ದೇಶಿಸಿ ಮಾತನಾಡುತ್ತಾ ಎಲ್ಲಾ ಬಿ.ಬಿ.ಎಂ.ಪಿ. ಶಾಲೆಗಳಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಘಟಕಗಳನ್ನು ಆರಂಭಿಸಲಾಗುವುದು ಎಂದು ತಿಳಿಸಿದರು.



ದಿ|| ವಿ.ಪಿ. ದೀನದಯಾಳು ನಾಯ್ಡು ರವರ ಜೀವನ ಸಾಧನೆಯ ಕುರಿತು ಕಿರುಹೊತ್ತಿಗೆಯನ್ನು ಶ್ರೀಯುತ. ಪಿ.ಸಿ. ಮೋಹನ್, ಸಂಸತ್ ಸದಸ್ಯರು ಬಿಡುಗಡೆ ಮಾಡಿದರು. ಶ್ರೀ ಪಿ. ಜಿ. ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಅವರು ಮಾತನಾಡುತ್ತಾ ದಿವಂಗತ ವಿ.ಪಿ.ದೀನದಯಾಳು ನಾಯ್ಡುರವರ ಆದರ್ಶಗಳನ್ನು ಈಗಿನ ಪೀಳಿಗೆ ಮಕ್ಕಳು ಅಳವಡಿಸಿಕೊಳ್ಳಲು ಕರೆ ನೀಡಿದರು. ಶ್ರೀ ವಿ.ಪಿ. ದೀನದಯಾಳು ನಾಯ್ಡುರವರು ಸ್ವಾತಂತ್ರ್ಯ ಹೋರಾಟಗಾರರಾಗಿ, ವಿಧಾನ ಪರಿಷತ್ ಸದಸ್ಯರಾಗಿ, ಬೆಂಗಳೂರು ಮಹಾನಗರ ಪಾಲಿಕೆಯ ಏಳನೆಯ ಪೂಜ್ಯ ಮಹಾಪೌರರಾಗಿ, ಅಂದಿನ ಸಿ.ಐ.ಟಿ.ಬಿ.ಗೆ ಅಧ್ಯಕ್ಷರಾಗಿ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ರಾಜ್ಯ ಮುಖ್ಯ ಆಯುಕ್ತರಾಗಿ ಮತ್ತು ರಾಷ್ಟ್ರೀಯ ಆಯುಕ್ತರಾಗಿ ಗಣನೀಯ ಸೇವೆಯನ್ನು ರಾಜ್ಯ ಮತ್ತು ರಾಷ್ಟ್ರಕ್ಕೆ ಸಲ್ಲಿಸಿರುತ್ತಾರೆ. ಎಂದು ಹೇಳಿದರು.

ದಿವಂಗತ ವಿ.ಪಿ.ದೀನದಯಾಳು ನಾಯ್ಡುರವರ ಹೆಸರು ಶಾಶ್ವತವಾಗಿ ಉಳಿಯುವ ನಿಟ್ಟಿನಲ್ಲಿ, ಅವರು ವಾಸವಿದ್ದ "ನಂದಿದುರ್ಗ ರಸ್ತೆಗೆ" "ಶ್ರೀ ವಿ.ಪಿ. ದೀನದಯಾಳು ನಾಯ್ಡು ರಸ್ತೆ" ಎಂದು ನಾಮಕರಣ ಮಾಡಲು ಮನವಿ ಮಾಡಿದರು. ಮುಂಬರಲಿರುವ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಕೌನ್ಸಿಲ್ ಸಭೆಯಲ್ಲಿ ಈ ಬಗ್ಗೆ ನಿರ್ಣಯ ತೆಗೆದುಕೊಳ್ಳಬೇಕೆಂದು ಪೂಜ್ಯ ಮಹಾಪೌರರಲ್ಲಿ ವಿನಂತಿಸಿದರು.

ದಿ. ವಿ.ಪಿ. ದೀನದಯಾಳು ನಾಯ್ಡು ಜನ್ಮ ಶತಮಾನೋತ್ಸವ ಸಮಿತಿಯ ಅಧ್ಯಕ್ಷರಾಗಿ ಡಾ. ಎಂ.ಆರ್. ಜಯರಾಂರವರು ಹಾಗೂ ಉಪಾಧ್ಯಕ್ಷರಾಗಿ ಲೋಕಸಭಾ ಸದಸ್ಯರಾದ ಶ್ರೀ ಪಿ.ಸಿ. ಮೋಹನ್‌ರವರು ಕಾರ್ಯನಿರ್ವಹಿಸಲು

ಒಪ್ಪಿಕೊಂಡಿರುವುದಕ್ಕಾಗಿ ಅವರುಗಳನ್ನು ಶ್ರೀ ಸಿಂಧ್ಯರವರು ಅಭಿನಂಧಿಸಿದರು. ಉಪ ಮಹಾಪೌರರಾದ ಶ್ರೀಮತಿ ಹೇಮಲತಾ, ಡಾ. ಎಂ.ಆರ್. ಜಯರಾಂ, ಮಾನ್ಯ ಅಧ್ಯಕ್ಷರು, ದಿ. ವಿ.ಪಿ. ದೀನದಯಾಳು ನಾಯ್ಡು ಜನ್ಮ ಶತಮಾನೋತ್ಸವ ಸಮಿತಿ, ಶ್ರೀ ಎಮ್. ಆನಂದ್, ಜೆ.ಡಿ.ಎಸ್. ಪಕ್ಷದ ನಾಯಕರು, ಶ್ರೀ. ಗೊ.ರು. ಚನ್ನಬಸಪ್ಪ, ಹಿರಿಯ ಸಾಹಿತಿಗಳು ಹಾಗೂ ಅಧ್ಯಕ್ಷರು ಪ್ರಕಟಣಾ ಸಮಿತಿ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಶ್ರೀಮತಿ ಗೀತ ನಟರಾಜ್, ರಾಜ್ಯ ಆಯುಕ್ತರು (ಗೈಡ್ಸ್), ಶ್ರೀ ಚಿನ್ನಸ್ವಾಮಿ ರೆಡ್ಡಿ, ರಾಜ್ಯ ಕಾರ್ಯದರ್ಶಿ, ಶ್ರೀ ಡಿ. ವೆಂಕಟೇಶ್, ಸಹಾಯಕ ರಾಜ್ಯ ಆಯುಕ್ತರು(ಸ್ಕೌಟ್ಸ್), ಮಹಾನಗರ ಪಾಲಿಕೆಯ ಸದಸ್ಯರುಗಳು, ವಿ.ಪಿ.ದೀನದಯಾಳು ನಾಯ್ಡುರವರ ಕುಟುಂಬದ ಸದಸ್ಯರುಗಳು, ಬೆಂಗಳೂರು ಉತ್ತರ ಹಾಗೂ ಬೆಂಗಳೂರು ದಕ್ಷಿಣ ಜಿಲ್ಲೆ ಮತ್ತು ಬಿ.ಬಿ.ಎಂ.ಪಿ. ಶಾಲೆಗಳಿಂದ ಸುಮಾರು 2000 ಮಕ್ಕಳು ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

ಪ್ರಾರಂಭದಲ್ಲಿ ಶ್ರೀ ಆರ್.ಎಸ್.ಸತ್ಯನಾರಾಯಣ, ಆಡಳಿತ ಪಕ್ಷದ ನಾಯಕರು ಎಲ್ಲರನ್ನೂ ಸ್ವಾಗತಿಸಿದರು. ಸಮಾರಂಭದ ಕೊನೆಯಲ್ಲಿ ವಂದನಾರ್ಪಣೆಯನ್ನು ಶ್ರೀ ಎಂ.ಎ. ಚೆಲ್ಲಯ್ಯ, ಸಂಚಾಲಕರು, ದಿ. ವಿ. ಪಿ. ದೀನದಯಾಳು ನಾಯ್ಡು ಜನ್ಮ ಶತಮಾನೋತ್ಸವ ಸಮಿತಿ, ಇವರು ಸಲ್ಲಿಸಿದರು.

ಈ ಕಾರ್ಯಕ್ರಮದ ಅಂಗವಾಗಿ ಕೆಳಕಂಡ ಚಟುವಟಿಕೆಗಳನ್ನು ಹಮ್ಮಿಕೊಳ್ಳಲಾಗಿತ್ತು.

1) ಬೆಳಗ್ಗೆ 9.00 ರಿಂದ 9.20ರವರೆಗೆ ಸರ್ವಧರ್ಮ ಪ್ರಾರ್ಥನೆ

2) 10.00 ಗಂಟೆಯಿಂದ 1.00 ಗಂಟೆಯವರೆವಿಗೆ ಕೆಳಕಂಡ ವಿಷಯಗಳ ಬಗ್ಗೆ ಮಾತನಾಡುವುದು, ಚಿತ್ರ ಬರೆಯುವುದು ಮತ್ತು ಪ್ರಬಂಧ ಸ್ಪರ್ಧೆಗಳನ್ನು ಏರ್ಪಡಿಸಲಾಗಿತ್ತು.

   ನೀರು ಉಳಿಸಿ – ಬೆಂಗಳೂರು ಉಳಿಸಿ, ಸ್ವಚ್ಛ ಬೆಂಗಳೂರು – ಸ್ವಸ್ಥ ಬೆಂಗಳೂರು, ವಿದ್ಯುತ್ ಸಂರಕ್ಷಣೆ, ಪರಿಸರ ಸಂರಕ್ಷಣೆ, ಮಾನ್ಯ ವಿ.ಪಿ.ದೀನದಯಾಳು ನಾಯ್ಡುರವರ ಜೀವನ ಚರಿತ್ರೆ

3) ಮಧ್ಯಾಹ್ನ 2.00 ರಿಂದ 2.15 ಗಂಟೆಯವರೆಗೆ ಶ್ರೀ ಕಾರ್ತಿಕ್‌ರವರ ಯೋಗ ಪ್ರದರ್ಶನ

4) 2.20 ರಿಂದ 3.20ರವರೆಗೆ ಮಕ್ಕಳಿಂದ ಸಾಂಸ್ಕೃತಿಕ ಕಾರ್ಯಕ್ರಮಗಳು

ಮೇಲ್ಕಂಡ ಚಟುವಟಿಕೆಗಳಲ್ಲಿ ಭಾಗವಹಿಸಿದ ಸ್ಕೌಟ್ಸ್ ಮತ್ತು ಗೈಡ್ಸ್ ಹಾಗೂ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಶಾಲೆಗಳಿಂದ ಆಗಮಿಸಿದ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಪೂಜ್ಯ ಮಹಾಪೌರರಾದ ಶ್ರೀ ಬಿ.ಎನ್. ಮಂಜುನಾಥ ರೆಡ್ಡಿರವರು ಹಾಗೂ ಉಪಸ್ಥಿತರಿದ್ದ ಇತರ ಗಣ್ಯರುಗಳು ಮೊದಲನೇ, ಬಹುಮಾನಗಳನ್ನು ಮತ್ತು ಪ್ರಮಾಣ ಪತ್ರಗಳನ್ನು ನೀಡಿದರು.

ಈ ಕಾರ್ಯಕ್ರಮವನ್ನು ಯಶಸ್ವಿಯಾಗಿ ಸಂಘಟಿಸುವಲ್ಲಿ ಶ್ರೀ ಎಂ.ಪ್ರಭಾಕರ್ ಭಟ್, ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್ಸ್), ಶ್ರೀ ಎಲ್.ಟಿ. ಲೋಕೇಶ್, ರಾಜ್ಯ ತರಬೇತಿ ಆಯುಕ್ತರು (ಸ್ಕೌಟ್ಸ್), ಶ್ರೀಮತಿ ಸಿ.ಮಂಜುಳಾ, ರಾಜ್ಯ ಸಂಘಟನಾ ಆಯುಕ್ತರು (ಗೈಡ್ಸ್), ಶ್ರೀಮತಿ ಕೆ.ವಿ.ಶಾಮಲ, ರಾಜ್ಯ ತರಬೇತಿ ಆಯುಕ್ತರು (ಗೈಡ್ಸ್), ಶ್ರೀಮತಿ ಪಿ. ಸರೋಜ, ಜಿಲ್ಲಾ ಮುಖ್ಯ ಆಯುಕ್ತರು, ಬೆಂಗಳೂರು ಉತ್ತರ ಜಿಲ್ಲೆ, ಶ್ರೀ ಬಿ.ಕೆ.ಶೇಷಾದ್ರಿ, ಜಿಲ್ಲಾ ಕಾರ್ಯದರ್ಶಿ, ಬೆಂಗಳೂರು ಉತ್ತರ ಜಿಲ್ಲೆ, ಶ್ರೀ ಸತೀಶ್, ಜಿಲ್ಲಾ ಕಾರ್ಯದರ್ಶಿ, ಬೆಂಗಳೂರು ದಕ್ಷಿಣ ಜಿಲ್ಲೆ, ಶಿಕ್ಷಣಾಧಿಕಾರಿಗಳು, ಬಿ.ಬಿ.ಎಂ.ಪಿ., ಇವರುಗಳು ಶ್ರಮವಹಿಸಿದರು.

ಶ್ರೀ ಎನ್.ಮಂಜುನಾಥ್ ಪ್ರಸಾದ್, ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಇವರ ಆದೇಶದ ಮೇರೆಗೆ ಶ್ರೀ ಎಸ್.ಜಿ. ರವೀಂದ್ರ, ವಿಶೇಷ ಆಯುಕ್ತರು (ಆಸ್ತಿ, ವಿದ್ಯೆ, ತೋಟಗಾರಿಕೆ ಮತ್ತು ಕಲ್ಯಾಣ ಇಲಾಖೆ) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಇವರ ನೇತೃತ್ವದಲ್ಲಿ ಶ್ರೀಮತಿ ನಂದಿನಿ, ಉಪ ಆಯುಕ್ತರು (ಆಡಳಿತ), ಡಾ॥ ಶಿವಶರಣಪ್ಪ ಎಸ್.ಖಂಡ್ರೆ, ಸಾರ್ವಜನಿಕ ಸಂಪರ್ಕ ಅಧಿಕಾರಿ, ಶ್ರೀ ಹನುಮಂತ ರಾಜು, ಶಿಕ್ಷಣ ಅಧಿಕಾರಿ, ಶ್ರೀ ಚಂದ್ರಶೇಖರ್, ಕಾರ್ಯಪಾಲಕ ಅಭಿಯಂತರರು, (JA©Er) ಹಾಗೂ ಶ್ರೀ ಗಿರೀಶ್ ಶೆಟ್ಟಿ, ಸಹಾಯಕ ಕಾರ್ಯಪಾಲಕ ಅಭಿಯಂತರರು (JA©Er) ಇವರುಗಳು ಕಾರ್ಯಕ್ರಮದ ಯಶಸ್ವಿಗೆ ಕಾರಣರಾಗಿದ್ದಾರೆ.

# ವಿ.ಪಿ. ದೀನದಯಾಳು ನಾಯ್ಡು ಅವರ
# ಒಂದು ನೆನಪು

ಹೆಸರಾಂತ ಶ್ರೀ ವಿ. ಪಾಪಯ್ಯನಾಯ್ಡು ಅವರ ಪುತ್ರ ಶ್ರೀ ವಿ.ಪಿ. ದೀನದಯಾಳು ನಾಯ್ಡು ಅವರು ಜನಿಸಿದ್ದು 1917ರ ಆಗಸ್ಟ್ 16ರಂದು. ಸೇಂಟ್ ಜೋಸೆಫ್ ಯೂರೋಪಿಯನ್ ಪ್ರೌಢಶಾಲಾ ಶಿಕ್ಷಣ ನಂತರ ಸೇಂಟ್ ಜೋಸೆಫ್ ಕಾಲೇಜಿನಿಂದ 1942ರಲ್ಲಿ ಪದವಿ ಕಾಲೇಜು ದಿನಗಳಲ್ಲಿ ಕಾಲೇಜು ಸಂಘದ ಉಪಾಧ್ಯಕ್ಷರಾಗಿ ಆಯ್ಕೆ.

ದೇಶದ ಸ್ವಾತಂತ್ರ್ಯ ಹೋರಾಟದ ಮೂಲಕ ದೇಶದ ಸೇವೆ ಸಲ್ಲಿಸುವ ಆಸಕ್ತಿಯಿಂದ 1942ರಲ್ಲೇ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸಿಗೆ ಸೇರ್ಪಡೆ. ಸ್ವಾತಂತ್ರ್ಯ ಹೋರಾಟದ ಮುಂದಾಳುಗಳಾಗಿದ್ದ ಮಹಾತ್ಮ ಗಾಂಧಿ, ಜವಾಹರಲಾಲ್ ನೆಹರೂ, ಚಕ್ರವರ್ತಿ ರಾಜಗೋಪಾಲಾಚಾರಿ, ಸಿದ್ಧವನಹಳ್ಳಿ ನಿಜಲಿಂಗಪ್ಪ, ಜಗಜೀವನರಾಮ್, ಕೆ.ಕಾಮರಾಜ್ ಮೊದಲಾದ ನಾಯಕರ ನಿಕಟ ಸಂಪರ್ಕ. ಕ್ವಿಟ್ ಇಂಡಿಯಾ ಚಳವಳಿಯಲ್ಲಿ ನೇರವಾಗಿ ಪಾಲುಗೊಂಡು ಎರಡುಬಾರಿ ಸೆರೆಮನೆ ವಾಸ. ಸ್ವಾತಂತ್ರ್ಯ ಹೋರಾಟಗಾರರ ಸಂಘದ ಬೆಂಗಳೂರು ಸಿವಿಲ್ ಸ್ಟೇಷನ್ ಘಟಕದ ಅಧ್ಯಕ್ಷರಾಗಿ ಕೊನೆಯ ದಿನಗಳವರೆಗೂ ಸೇವೆ. ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಸದಸ್ಯರೂ ಆಗಿದ್ದ ನಾಯ್ಡು ಅವರು 1948ರಲ್ಲಿ ರಾಜ್ಯ ವಿಧಾನ ಪರಿಷತ್‌ಗೆ ನಾಮಕರಣಗೊಂಡರು. ನಂತರ 1957–1962 ರ ಅವಧಿಗೆ ಕಬ್ಬನ್ ಕ್ಷೇತ್ರದಿಂದ ಆಯ್ಕೆ.



ಮುಂಬಯಿ ವಿಶ್ವವಿದ್ಯಾಲಯದ ಪುಣೆಯ ಕಾನೂನು ಕಾಲೇಜಿಗೆ ಪ್ರವೇಶ. ಕಾನೂನು ವಿದ್ಯಾರ್ಥಿಯಾಗಿದ್ದಾಗಲೇ ಬೆಂಗಳೂರು ಪುರಸಭೆ ಚುನಾವಣೆಯಲ್ಲಿ ಅವಿರೋಧ ಆಯ್ಕೆ. 1945ರಲ್ಲಿ ಕಾನೂನು ಪದವಿ ಗಳಿಕೆ. ಕರ್ನಾಟಕ ನ್ಯಾಯವಾದಿಗಳ ಮಂಡಳಿ ಸದಸ್ಯರಾಗಿ 1947ರಿಂದ ಕಾನೂನು ಸೇವೆ. ಕರ್ನಾಟಕದ ಅಡ್ವೋಕೇಟ್ ಜನರಲ್ ಆಗಿದ್ದ ಹೆಸರಾಂತ ನ್ಯಾಯವಾದಿ ಶ್ರೀ ಜಿ.ಆರ್. ಯತಿರಾಜುಲು ನಾಯ್ಡು ಅವರ ಕಛೇರಿಯಲ್ಲಿ ವೃತ್ತಿ ಆರಂಭ.

ನಗರಪಾಲಿಕೆ ಶಾಸನ ಜಾರಿಗೆ ಬಂದ ವರ್ಷದಲ್ಲೇ 1949ರಲ್ಲಿ ದೀನದಯಾಳು ನಾಯ್ಡು ಅವರು ಬೆಂಗಳೂರು ನಗರ ಪಾಲಿಕೆಯ ಮೊದಲ ಉಪ ಮಹಾಪೌರರಾಗಿ ಆಯ್ಕೆಯಾದರು. 1955ರಲ್ಲಿ ಮಹಾಪೌರರಾಗಿ ಆಯ್ಕೆಯಾಗಿದ್ದರು. ಆ ಅವಧಿಯಲ್ಲಿ ರಷ್ಯಾದ ಅಧ್ಯಕ್ಷ ಖ್ರುಶ್ಚೇವ ಮತ್ತು ಪ್ರಧಾನಿ ಬುಲ್ಗಾನಿನ್, ಸೌದಿ ರಾಜಕುಮಾರ ಮತ್ತಿತರ ಅಂತಾರಾಷ್ಟ್ರೀಯ ಪ್ರಮುಖ ನಾಯಕರಿಗೆ ನಾಯ್ಡು ಅವರಿಂದ ಸ್ವಾಗತ.

ಬೆಂಗಳೂರು ಸಿಟಿ ಇಂಪ್ರೂವ್‌ಮೆಂಟ್ ಟ್ರಸ್ಟ್ (ಈಗಿನ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ) ಮಂಡಳಿಗೆ ನಿರಂತರ ನಾಲ್ಕು ವರ್ಷಗಳಲ್ಲಿ ಆಯ್ಕೆ. 1959ರಲ್ಲಿ

ಮಂಡಳಿಯ ಅಧ್ಯಕ್ಷರಾಗಿ ನೇಮಕ. ಅವರ ಅಧ್ಯಕ್ಷತೆಯ ಅವಧಿಯಲ್ಲಿ ಬೃಹತ್ ಬೆಂಗಳೂರಿನ ಅಭಿವೃದ್ಧಿಗೆ ಮಹತ್ವದ ಕಾರ್ಯಾರಂಭ. ಪ್ಯಾಲೇಸ್ ಆರ್ಚರ್ಡ್ಸ್, ರಾಜಾಮಹಲ್ ವಿಲಾಸ್, ಜಯಮಯಲ್, ಜಯನಗರ, ವಿಕ್ಟೋರಿಯಾ, ರಾಜಾಜಿನಗರ ಮೊದಲಾದ ಬಡಾವಣೆಗಳ ರಚನೆ.



ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯ ಸಾರ್ವಜನಿಕ ಸೇವೆಯಲ್ಲಿ ಶ್ರೀ ವಿ.ಪಿ. ದೀನದಯಾಳು ನಾಯ್ಡು ಅವರದು ಸ್ಮರಣೀಯ ದಾಖಲೆ. 1942ರಲ್ಲಿ ಕಾಲೇಜು ದಿನಗಳಲ್ಲೇ ರೋವರ್ ಆಗಿ ಆರಂಭ. ಸ್ಕೌಟ್ಸ್ ಮತ್ತು ಗೈಡ್ಸ್ ಚಳುವಳಿಯಲ್ಲಿ ನಾಯ್ಡು ಅವರದ್ದು ಆರು ದಶಕಗಳ ಸುದೀರ್ಘ ಸೇವೆ. ಈ ಸಂಘಟನೆಯಲ್ಲಿ 1983 ರಿಂದ 1993 ರ ವರೆಗೆ ಸ್ಕೌಟ್ ವಿಭಾಗದ ಸಹಾಯಕ ಆಯುಕ್ತರಾಗಿ, ಬೆಂಗಳೂರು ಉತ್ತರ ಜಿಲ್ಲೆಯ ಜಿಲ್ಲಾ ಆಯುಕ್ತರಾಗಿ, ಅಧ್ಯಕ್ಷರಾಗಿ, ರಾಜ್ಯ ಸಂಸ್ಥೆಯ ಕಾರ್ಯದರ್ಶಿಯಾಗಿ, ರಾಜ್ಯ ಆಯುಕ್ತರಾಗಿ, 1982 ರಿಂದ 1993 ರ ವರೆಗೆ ರಾಜ್ಯ ಮುಖ್ಯ ಆಯುಕ್ತರಾಗಿ ಸೇವೆ.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಕರ್ನಾಟಕ ಸಂಘಟನೆಯ ಮುಖ್ಯ ಆಯುಕ್ತರಾಗಿದ್ದ ಶ್ರೀ ಕೊಂಡಜ್ಜಿ ಬಸಪ್ಪನವರ 60ನೆಯ ಜನ್ಮ ದಿನಾಚರಣೆ ಸಮಿತಿಯ ಸಂಚಾಲಕರಾಗಿ ಸಂಸ್ಥೆಯ ಇತರ ಪದಾಧಿಕಾರಿಗಳ ನೆರವಿನೊಂದಿಗೆ ಗಣನೀಯ ಮೊತ್ತದ ನಿಧಿ ಸಂಗ್ರಹ ಮತ್ತು ಯಶಸ್ವಿ ಜನ್ಮದಿನಾಚರಣೆ.

ಸ್ಕೌಟ್-ಗೈಡ್ ಚಳವಳಿಯ ರಾಜ್ಯ ನಾಯಕರಾಗಿ, ರಾಷ್ಟ್ರದ ನಾನಾ ಸ್ಕೌಟ್ಸ್ ಮತ್ತು ಗೈಡ್ಸ್ ಸಂಘಟನೆಗಳನ್ನು ಒಟ್ಟುಗೂಡಿಸಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ವ್ಯಾಪ್ತಿಗೆ ತಂದ ಕೀರ್ತಿ ಶ್ರೀ ದೀನದಯಾಳು ನಾಯ್ಡು ಅವರದ್ದು. ದೊಡ್ಡಬಳ್ಳಾಪುರದ ಬಳಿ ಇರುವ ಡಾ. ಅನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಹಾಗೂ ಶಿಬಿರ ಕೇಂದ್ರದ ಆವರಣದಲ್ಲಿ ಸ್ಕೌಟ್ ಚಳವಳಿಯ ಪ್ರವರ್ತಕರಾದ ಬೇಡನ್ ಪೊವೆಲ್ ಅವರ ಕಂಚಿನ ಪ್ರತಿಮೆ ಸ್ಥಾಪನೆ ಸಮಿತಿಯ ಅಧ್ಯಕ್ಷರಾಗಿ ಗಣನೀಯ ಕೊಡುಗೆ. ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿ ಕ್ಷೇತ್ರದ ದೀರ್ಘ ಸೇವೆಗಾಗಿ ರಾಷ್ಟ್ರ ಸಂಸ್ಥೆಯ ಪ್ರತಿಷ್ಠಿತ ಮತ್ತು ಅತ್ಯುನ್ನತ ಸಿಲ್ವರ್ ಎಲಿಫೆಂಟ್ ಪ್ರಶಸ್ತಿ ಪುರಸ್ಕಾರ. ಚಳವಳಿಯ ಉದ್ದಕ್ಕೂ ತಮಗೆ ಮಾರ್ಗದರ್ಶಕರಾಗಿದ್ದ ಶ್ರೀ ಕೊಂಡಜ್ಜಿ ಬಸಪ್ಪನವರೊಡನೆ ಜೊತೆಗೂಡಿದ ಸೇವೆ, ಹಾಗೆಯೇ ಸ್ಕೌಟ್-ಗೈಡ್ ಚಳವಳಿಯ ದಿಗ್ಗಜರೆನಿಸಿದ್ದ ಡಾ. ಎಸ್.ಪಿ. ಕೌಶಿಕ್, ಶ್ರೀ ಎ.ಡಿ. ಆನಂದನ್, ಮೇಜರ್ ಎಂ.ಆರ್. ನಾರಾಯಣ ಸಿಂಗ್, ಶ್ರೀಮತಿ ಎಂ.ಆರ್. ಲಕ್ಷ್ಮಮ್ಮ, ಶ್ರೀಮತಿ ಲಲಿತಾ ಕೃಷ್ಣಸ್ವಾಮಿ ಮೊದಲಾದ ಹಿರಿಯರೊಡನೆ ನಿಕಟಸಂಪರ್ಕ. ಕರ್ನಾಟಕ ಸಂಸ್ಥೆಗೆ ಘನತೆ-ಗೌರವ ಸಂಪಾದನೆ.

ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಗೆ ನಾಯ್ಡು ಅವರ ಸುದೀರ್ಘ ಹಾಗೂ ಗಮನಾರ್ಹ ಕೊಡುಗೆಗೆ ಮನ್ನಣೆಯಾಗಿ 1989ರಲ್ಲಿ ಸ್ಕೌಟ್ ವಿಭಾಗದ ಮುಖ್ಯ ಆಯುಕ್ತರಾಗಿ ನೇಮಕ. ದಕ್ಷಿಣ ಭಾರತದ ಎಲ್ಲಾ ಕ್ಷೇತ್ರ ಘಟಕಗಳಿಗೆ ಭೇಟಿ. 1992 ರಲ್ಲಿ ಸಂಸ್ಥೆಯ ಅತ್ಯುನ್ನತ ಪದವಿಯಾದ ರಾಷ್ಟ್ರೀಯ ಆಯುಕ್ತರಾಗಿ ಆಯ್ಕೆ, ಮೂರು ವರ್ಷಗಳ ತಮ್ಮ ಅಧಿಕಾರಾವಧಿಯಲ್ಲಿ ಇಡೀ ಭಾರತದಲ್ಲಿ ಪ್ರವಾಸಮಾಡಿ ಸ್ಕೌಟ್ ಮತ್ತು ಗೈಡ್ ಚಟುವಟಿಕೆಗಳಿಗೆ ಉತ್ತೇಜನ. ಪರಿಣಾಮವಾಗಿ ಸ್ಕೌಟ್ಸ್ ಮತ್ತು ಗೈಡ್ಸ್ ಸದಸ್ಯತ್ವದಲ್ಲಿ ಗಣನೀಯ ಹೆಚ್ಚಳ. ಅವರ ಅವಧಿಯಲ್ಲಿ ಮಧ್ಯಪ್ರದೇಶದ ಪಚಮರಿಯಲ್ಲಿ ಭಾರತ್

ಸ್ಕೌಟ್ಸ್ ಮತ್ತು ಗೈಡ್ಸ್‌ನ ರಾಷ್ಟ್ರೀಯ ಸಾಹಸ ಸಂಸ್ಥೆ, ರಾಷ್ಟ್ರೀಯ ತರಬೇತಿ ಕೇಂದ್ರ ಸ್ಥಾಪನೆ. ನಾಯ್ಡು ಅವರ ಗಮನಾರ್ಹ ಸೇವೆಯ ಮನ್ನಣೆಯಾಗಿ ಏಷಿಯಾ ಪೆಸಿಫಿಕ್ ವಲಯದ 'ಛೇರ್ಮನ್ ಪ್ರಶಸ್ತಿ' ಪುರಸ್ಕಾರ.

ನಿಷ್ಠಾವಂತ ರೋಟೇರಿಯನ್ ಆದ ಶ್ರೀ ದೀನದಯಾಳು ನಾಯ್ಡು, ತಾವು ಆರಂಭಿಸಿದ ಬೆಂಗಳೂರು ಪೂರ್ವ ರೋಟರಿ ಕ್ಲಬ್ ಅಧ್ಯಕ್ಷರೂ ಆಗಿದ್ದರು. ಸುಮಾರು 30 ವರ್ಷಗಳಿಗೂ ಮಿಕ್ಕ ಅವರ ರೋಟರಿ ಸೇವೆಗಾಗಿ ಅಂತಾರಾಷ್ಟ್ರೀಯ ರೋಟರಿ 'ಸರ್ವಿಸ್ ಎಬೌ ಸೆಲ್ಫ್' ಎಂಬ ತನ್ನ ಅತ್ಯುನ್ನತ ಪ್ರಶಸ್ತಿ ನೀಡಿ ಗೌರವಿಸಿದೆ.

ಶ್ರೀ ದೀನದಯಾಳು ನಾಯ್ಡು ಅವರು ಟೆನ್ನಿಸ್, ಹಾಕಿ, ಈಜು ಮುಂತಾದ ಕ್ರೀಡೆಗಳಲ್ಲೂ ಹೆಸರು ಗಳಿಸಿದ್ದರು. ಕರ್ನಾಟಕ ರಾಜ್ಯ ಈಜುಗಾರರ ಸಂಘ ಮತ್ತು ಹಾಕಿ ಸಂಘಗಳ ಅಧ್ಯಕ್ಷರಾಗಿ, ರಾಜ್ಯ ಒಲಿಂಪಿಕ್ ಸಂಸ್ಥೆಯ ಉಪಾಧ್ಯಕ್ಷರಾಗಿ ಸೇವೆ.

ಅವರು ಸೇವೆ ಸಲ್ಲಿಸಿದ ಇತರ ಪದಾಧಿಕಾರದ ಸ್ಥಾನಗಳೆಂದರೆ, ಮಕ್ಕಳ ಕ್ಷೇಮ ಮಂಡಳಿಯ ಅಧ್ಯಕ್ಷತೆ, ಕರ್ನಾಟಕದ ಬಾರ್ ಅಸೋಸಿಯೇಷನ್ ಹಿರಿಯ ಸದಸ್ಯತ್ವ, ರಾಮಕೃಷ್ಣಾಶ್ರಮದ ಶಾಖೆಯಾದ ಯೋಗೇಶ್ವರ ನಂದ ಪ್ರೌಢಶಾಲಾ ಸಂಸ್ಥಾಪಕ, ನಂದಿದುರ್ಗದ ಬಂಡೆ ಆಂಜನೇಯ ದೇವಾಲಯ ಮತ್ತು ತಮ್ಮ ಮನೆದೈವ ವೇಣುಗೋಪಾಲಸ್ವಾಮಿ ದೇವಾಲಯದ ಮಂಡಳಿಗಳ ಸ್ಥಾಪಕ, ಬೆಂಗಳೂರಿನ ಶ್ರೀ ಲಕ್ಷ್ಮಿನರಸಿಂಹಸ್ವಾಮಿ ದೇವಾಲಯದ ಧರ್ಮಾಧಿಕಾರಿ ಇತ್ಯಾದಿ.



ದೇಶದ ಸ್ವಾತಂತ್ರ್ಯ ಹೋರಾಟ ಮತ್ತು ಸ್ಕೌಟ್-ಗೈಡ್ ಚಳವಳಿಗೆ ಸಲ್ಲಿಸಿದ ಗಮನಾರ್ಹ ಸೇವೆಗೆ ಮನ್ನಣೆಯಾಗಿ 1995ರಲ್ಲಿ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ. ಹಾಗೆಯೇ ಬೆಂಗಳೂರು ಮಹಾನಗರ ಪಾಲಿಕೆಯಿಂದ ನಾಡಪ್ರಭು ಕೆಂಪೇಗೌಡ ಪ್ರಶಸ್ತಿ. ಸ್ಕೌಟ್ ಮತ್ತು ಗೈಡ್ ಚಳವಳಿಯ ಸಂಬಂಧದಿಂದಾಗಿ, ಇಂಗ್ಲೆಂಡ್, ಅಮೆರಿಕಾ, ಕೆನಡಾ, ಜರ್ಮನಿ, ಫ್ರಾನ್ಸ್, ಥೈಲ್ಯಾಂಡ್, ಆಸ್ಟ್ರಿಯಾ, ಚೈನಾ, ಜಪಾನ್ ಇತ್ಯಾದಿ ಅನೇಕ ವಿದೇಶಗಳಲ್ಲಿ ಪ್ರವಾಸ.

ಧರ್ಮಪತ್ನಿ ಶ್ರೀಮತಿ ಇಂದಿರಾ. ಇಬ್ಬರು ಹೆಣ್ಣುಮಕ್ಕಳು – ಶ್ರೀಮತಿ ಶೋಭಾ ಕಮಲಾಕರ್ ಮತ್ತು ಶ್ರೀಮತಿ ಮೀರಾ ಹರಿನಾಥ್ ಮತ್ತು ಒಬ್ಬ ಪುತ್ರ ಶ್ರೀ ಡಿ. ವೆಂಕಟೇಶ್ ಹಾಗೂ ಐದು ಜನ ಮೊಮ್ಮಕ್ಕಳನ್ನೂ ಒಳಗೊಂಡ ದೊಡ್ಡ ಕುಟುಂಬ ನಾಯ್ಡುರವರದು.

ಶ್ರೀ ದೀನದಯಾಳು ನಾಯ್ಡು ಅವರು ನಿಧನರಾದದ್ದು 1998ರ ಜನವರಿ 8 ರಂದು. ಯೋಗಾಯೋಗವೆಂದರೆ ಸ್ಕೌಟ್ ಮತ್ತು ಗೈಡ್ ಚಳವಳಿಯ ಜನಕ ಲಾರ್ಡ್ ಬೇಡನ್ ಪೊವೆಲ್ ಅವರೂ 1941ರ ಅದೇ ಜನವರಿ 8 ರಂದೇ ಸ್ವರ್ಗವಾಸಿಗಳಾದದ್ದು.

ಇದೇ 2016ರ ಡಿಸೆಂಬರ್ ತಿಂಗಳಲ್ಲಿ ಮೈಸೂರಿನಲ್ಲಿ ನಡೆಯುವ 'ರಾಷ್ಟ್ರೀಯ ಜಾಂಬೂರಿ' ಯನ್ನು ದಿ॥ ವಿ.ಪಿ. ದೀನದಯಾಳು ನಾಯ್ಡು ಅವರಿಗೆ ಅರ್ಪಿಸಲಾಗುತ್ತದೆ. ರಾಜ್ಯದಾದ್ಯಂತ ನಡೆಯುವ ನಾಯ್ಡು ಅವರ ಜನ್ಮ ಶತಮಾನೋತ್ಸವ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಕರ್ನಾಟಕ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರ ನೇತೃತ್ವದಲ್ಲಿ ನಡೆಯುತ್ತದೆ.



## Visit of Chief National Commissioner Sri B.I .Nagarale, I.A.S (Retd)

Sri B.I. Nagarale I.A.S (Retd) Chief National Commissioner, The Bharat Scouts & Guides India visited the Jamboree site on 10 August 2016 where 17th National Jamboree is going to be held. He was taken round the site and was given the necessary information by Sri P. Vishwanath District Chief commissioner Mysore Dist. and Secretary General 17th National Jamboree. He stayed more than 45 minutes in the site and was satisfied with the location. He felt that the preparation should go on war footing.

Sri P.G.R. Sindhia State Chief Commissioner accompanied him and assured him that steps have been taken in the direction under the leadership of Deputy Commissioner and other Department Leaders. Sri M.A. Khalid, S.C(S) & International Commissioner, Smt. Geetha Nataraj, SC(G)and Other State officials, Mysore District Officials of Mysore District, D.C.C of Various Districts and Members of the Executive Committee were present on the occassion.

Dr Sukumara Director, Sri Krishnaswamy Ramamurthy Deputy Director (Boy Programme) Smt. Suman latha, Deputy Director (Girl Programme) Smt. Surekha, Joint Director Bharat S & G National Headquarters ,New Delhi Sri Analendra Sharma R.O.C Of Southern Region accompanied the Chief National Commissioner.

Earlier all the Dignitaries visited Sri Chamundeshwari Temple and offered prayers for the success of the Jamboree. Later they participated in the State Executive Committee meeting held at District Headquarters , Mysuru.



# ದಿವಂಗತ ರಾಜೀವ್ ಗಾಂಧಿ

## ಭಾರತದ ಪೂರ್ವ ಪ್ರಧಾನ ಮಂತ್ರಿಗಳು

## ಇವರ ಜನ್ಮ ದಿನದ ಅಂಗವಾಗಿ ಏರ್ಪಡಿಸಿದ ಸದ್ಭಾವನಾ ದಿನಾಚರಣೆ

ದಿನಾಂಕ 20-08-2016 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ರಾಜ್ಯ ಸಂಸ್ಥೆ ಮತ್ತು ಬೆಂಗಳೂರು ದಕ್ಷಿಣ ಜಿಲ್ಲಾ ಸಂಸ್ಥೆ ಇವರ ಸಹಯೋಗದಲ್ಲಿ ಐಸಾಕ್ ನ್ಯೂಟನ್ ಪ್ರೌಢಶಾಲೆ, ಕಾಟನ್ ಪೇಟೆ, ಬೆಂಗಳೂರು ಇಲ್ಲಿ ಸದ್ಭಾವನಾ ದಿನಾಚರಣೆಯನ್ನು ಸಂಘಟಿಸಲಾಯಿತು. ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು, ಮಾಜಿ ಪ್ರಧಾನಿ ರಾಜೀವ್ ಗಾಂಧಿಯವರ ಭಾವಚಿತ್ರಕ್ಕೆ ಪುಷ್ಪ ಸಮರ್ಪಿಸಿ ಕಾರ್ಯಕ್ರಮವನ್ನು ಉದ್ಘಾಟಿಸಿ ಸ್ಕೌಟ್ಸ್-ಗೈಡ್ಸ್ ವಿದ್ಯಾರ್ಥಿಗಳಿಗೆ ಸದ್ಭಾವನಾ ಪ್ರತಿಜ್ಞಾವಿಧಿಯನ್ನು ಭೋದಿಸಿದರು. ರಾಜೀವ್ ಗಾಂಧಿಯವರು ಪ್ರಧಾನ ಮಂತ್ರಿಯಾಗಿ ದೇಶಕ್ಕೆ ಅಮೂಲ್ಯ ಕೊಡುಗೆ ಸಲ್ಲಿಸಿದ್ದು, ವಿಜ್ಞಾನ ಮತ್ತು ತಂತ್ರಜ್ಞಾನ ಅಭಿವೃದ್ಧಿಗೆ ಅಪಾರ ಕೊಡುಗೆ ನೀಡಿದ್ದಾರೆ ಹಾಗೂ ಭಾರತದಲ್ಲಿ ಹೊಸ ಶಿಕ್ಷಣ ನೀತಿಯನ್ನು ಜಾರಿಗೆ ತಂದಿರುತ್ತಾರೆ. ರಾಜೀವ್ ಗಾಂಧಿಯವರ ಜನ್ಮ ದಿನವನ್ನು ಸದ್ಭಾವನಾ ದಿನಾಚರಣೆಯಾಗಿ ಆಚರಿಸುತ್ತಿದ್ದು ಎಲ್ಲರೂ ಸದ್ಭಾವನೆಯಿಂದ ದೇಶದ ಪ್ರಗತಿಗೆ ಶ್ರಮಿಸಬೇಕೆಂದು ತಿಳಿಸಿದರು.

ಬೆಂಗಳೂರು ದಕ್ಷಿಣ ಜಿಲ್ಲಾ ಸಂಸ್ಥೆಯ ಜಿಲ್ಲಾ ಆಯುಕ್ತರು(ಸ್ಕೌಟ್ಸ್) ಶ್ರೀ ಪಿ. ಪಳನಿ, ಶ್ರೀಮತಿ ಜಾನಕಿ ವೇಣುಗೋಪಾಲ್, ನಿವೃತ್ತ ರಾಜ್ಯ ಸಂಘಟನಾ ಆಯುಕ್ತರು(ಗೈಡ್ಸ್) ಮುಖ್ಯ ಅತಿಥಿಗಳಾಗಿ ಮಾತನಾಡಿದರು. ಸ್ಕೌಟ್ ಭುವನೇಶ್, ಗೈಡ್ ಮಮತ ಇವರು ದಿನದ ಮಹತ್ವದ ಬಗ್ಗೆ ಮಾತನಾಡಿದರು. ಶ್ರೀ ಎಂ.ಎಸ್. ಸತೀಶ್, ಜಿಲ್ಲಾ ಕಾರ್ಯದರ್ಶಿ ಸ್ವಾಗತಿಸಿದರು. ಶ್ರೀ ಎಲ್.ಟಿ. ಲೋಕೇಶ್, ರಾಜ್ಯ ತರಬೇತಿ ಆಯುಕ್ತರು(ಸ್ಕೌಟ್ಸ್) ವಂದಿಸಿದರು.

ಶ್ರೀಮತಿ ಪ್ರವೀಣಾ ಕುಮಾರಿ, ಕಾರ್ಯಕ್ರಮ ನಿರೂಪಿಸಿದರು. ಶ್ರೀ ಜೈಬಸವರಾಜ್ ಪ್ರಾಸ್ತಾವಿಕ ನುಡಿಗಳನ್ನು ನುಡಿದರು. ಶ್ರೀ ಅರುಣ್ ಕುಮಾರ್ ಪತ್ತಾರ್ ಸಹಾಯಕ ನಿರ್ದೇಶಕರು, ದಕ್ಷಿಣ ವಲಯ, ಶ್ರೀ ಎಂ. ಪ್ರಭಾಕರ್ ಭಟ್, ರಾಜ್ಯ ಸಂಘಟನಾ ಆಯುಕ್ತರು(ಸ್ಕೌಟ್ಸ್) ಶ್ರೀಮತಿ ಕೆ.ವಿ. ಶ್ಯಾಮಲ, ರಾಜ್ಯ ತರಬೇತಿ ಆಯುಕ್ತರು(ಗೈಡ್ಸ್) ಉಪಸ್ಥಿತರಿದ್ದರು. ಸರ್ವಧರ್ಮ ಪ್ರಾರ್ಥನೆ, ದೇಶಭಕ್ತಿ ಗೀತೆ, ಪರಿಸರದ ಚಿತ್ರ, ನೃತ್ಯ ಕಾರ್ಯಕ್ರಮ ಆಯೋಜಿಸಲಾಗಿತ್ತು. ಸುಮಾರು 150ಕ್ಕೂ ಹೆಚ್ಚು ಸ್ಕೌಟ್-ಗೈಡ್‌ಗಳು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.






70ನೇ ಸ್ವಾತಂತ್ರ್ಯ ದಿನಾಚರಣೆಯನ್ನು ರಾಜ್ಯ ಕೇಂದ್ರ ಕಛೇರಿಯಲ್ಲಿ ದಿನಾಂಕ 15 ಆಗಸ್ಟ್ 2016 ರಂದು ಆಚರಿಸಲಾಯಿತು. ಶ್ರೀ ಚಿನ್ನಸ್ವಾಮಿ ರೆಡ್ಡಿ, ರಾಜ್ಯ ಕಾರ್ಯದರ್ಶಿ ಇವರು ಧ್ವಜಾರೋಹಣವನ್ನು ನೆರವೇರಿಸಿ ಮಾತನಾಡುತ್ತಾ, ಸ್ವಾತಂತ್ರ್ಯವು ಹೇಗೆ ದೊರಕಿದೆ, ಅದನ್ನು ಸಂರಕ್ಷಿಸುವ ಬಗೆ, ದೇಶಕ್ಕಾಗಿ ನಮ್ಮ ಕರ್ತವ್ಯ ಇವುಗಳ ಬಗ್ಗೆ ಸಂದೇಶವನ್ನು ನೀಡಿದರು.

ಶ್ರೀಮತಿ ಗೀತಾನಟರಾಜ್ ರಾಜ್ಯ ಆಯುಕ್ತರು (ಗೈಡ್ಸ್) ಮಾತನಾಡುತ್ತಾ ವೀರ ಯೋಧರನ್ನು ಸ್ಮರಿಸಿ ಅವರ ಬಲಿದಾನ, ಸ್ಕೌಟಿಂಗ್ ಮತ್ತು ಗೈಡಿಂಗ್‌ನಲ್ಲಿರುವ ತತ್ವಗಳು ಮತ್ತು ಮಹಾತ್ಮಾ ಗಾಂಧೀಜಿ ಇವರ ಬಗ್ಗೆ ತಿಳಿಸಿದರು.

ಶ್ರೀಮತಿ ಎಸ್.ಕೆ. ಪ್ರಭ ರಾಜ್ಯ ಜಂಟಿ ಕಾರ್ಯದರ್ಶಿಗಳು ಮಾತನಾಡಿ ಸ್ವತಃ ತಮ್ಮ ತಂದೆಯವರು ಸ್ವಾತಂತ್ರ್ಯಕ್ಕಾಗಿ ವೀರ ಹೋರಾಟ ಮಾಡಿದ ಮತ್ತು ಕಾರಾಗೃಹವಾಸದ ಅನುಭವಗಳನ್ನು ನೆನಪಿಸಿಕೊಂಡರು.

ನಂತರ ರಾಜ್ಯ ಕೇಂದ್ರ ಕಛೇರಿ ಶಾಂತಿ ಗೃಹ ಆವರಣದಲ್ಲಿ ಸಸಿನೆಡುವ ಕಾರ್ಯಕ್ರಮವನ್ನು ಆಯೋಜಿಸಲಾಗಿತ್ತು, ಶ್ರೀ ಪ್ರಭುದೇವ್ ಚಿಗಟೇರಿ, ರಾಜ್ಯ ಖಜಾಂಚಿಗಳು, ಶ್ರೀ ಮೋಹನ್ ಕೊಂಡಜ್ಜಿ, ಶ್ರೀ ವಿನ್ಸೆಂಟ್ ಜಾಕಬ್, ಕು. ಮೇಘನಾ, ಎಸ್. ಬೆಳವಾಡಿ, ರಾಜ್ಯ ಪದಾಧಿಕಾರಿಗಳು ರೋವರ್ಸ್-ರೇಂಜರ್ಸ್, ಸ್ಕೌಟ್ಸ್-ಗೈಡ್ಸ್ ಸಸಿಗಳನ್ನು ನೆಟ್ಟು ಪರಿಸರದ ಜಾಗೃತಿಯನ್ನು ಮೂಡಿಸಿದರು.

---

## ಹ್ಯಾಮ್ ರೇಡಿಯೋ ತರಬೇತಿ

ಭಾರತ್ ಸ್ಕೌಟ್ಸ್-ಗೈಡ್ಸ್ ರಾಜ್ಯ ಸಂಸ್ಥೆಯು ಬೆಂಗಳೂರು ಅಮೆಚೂರು ರೇಡಿಯೋ ಕ್ಲಬ್ ಸಹಕಾರದಲ್ಲಿ ಮಾರ್ಚ್ ತಿಂಗಳಲ್ಲಿ ಹ್ಯಾಮ್ ರೇಡಿಯೋ (HAM RADIO) ತರಬೇತಿ ಶಿಬಿರ ಹಮ್ಮಿಕೊಂಡಿದ್ದು, ತರಬೇತಿಯಲ್ಲಿ ಭಾಗವಹಿಸಿ (Amateur Station Operators Certificate Examination) ಪರೀಕ್ಷೆಗೆ ಅರ್ಜಿ ಸಲ್ಲಿಸಿರುವ ವಿದ್ಯಾರ್ಥಿಗಳಿಗೆ ದಿನಾಂಕ 17-07-2016 ರಂದು, ಪೂರ್ವ ಸಿದ್ದತಾ ತರಬೇತಿಯನ್ನು ಬೆಂಗಳೂರು ಅಮೆಚೂರು ರೇಡಿಯೋ ಕ್ಲಬ್‌ನ ಪದಾಧಿಕಾರಿಗಳು ತರಬೇತಿ ನೀಡಿರುತ್ತಾರೆ.

ಭಾರತ ಸರ್ಕಾರದ Communication & Information Technology ಸಚಿವಾಲಯದ ಅಧೀನದಲ್ಲಿರುವ ಟೆಲಿಕಮ್ಯುನಿಕೇಷನ್ ವಿಭಾಗದ ವೈರ್‌ಲೆಸ್ ಮಾನಿಟರಿಂಗ್ ಸ್ಟೇಷನ್ ಬೆಂಗಳೂರು ಇವರು ದಿನಾಂಕ 18-07-2016 ರಂದು ನಡೆಸಿರುವ Amateur Station Operator Certificate Examination ನಲ್ಲಿ 23 ವಿದ್ಯಾರ್ಥಿಗಳು ಭಾಗವಹಿಸಿ ಉತ್ತೀರ್ಣರಾಗಿರುತ್ತಾರೆ. ಉತ್ತೀರ್ಣರಾಗಿರುವವರ ಹೆಸರುಗಳು ಈ ಕೆಳಕಂಡಂತಿದೆ.

1) ಶಂಭುಲಿಂಗ ಬಸವನೆಪ್ಪ ಅರಳಿಕಟ್ಟೆ, 2) ನಿರಂಜನ ಕುಮಾರ್ ವಿ, ಕೋಲಾರ, 3) ಸುನಿಲ್ ಬಿ., ಬೆಂಗಳೂರು. 4) ತುಳಸಿ ಎಮ್, ಕೋಲಾರ, 5) ರೇಣುಕ ಜಿ, ಕೋಲಾರ, 6) ನವ್ಯಶ್ರೀ ಡಿ, ಬೆಂಗಳೂರು. 7) ರೋಜ ಎನ್ – ಕೋಲಾರ, 8) ಸಿಂಧುಶ್ರೀ ಕೆ, ಕೋಲಾರ, 9) ಅಶ್ವಿನಿ ಪಿ.ಎ., ಕೋಲಾರ, 10) ಅನುಷ ಹೆಚ್.ಸಿ., ಕೋಲಾರ, 11) ಐಶ್ವರ್ಯ ಟಿ. ಬೆಂಗಳೂರು. 12) ಕಟಗೇರಿ ಚೈತ್ರ ಮಾರುತಿ, ಬೆಂಗಳೂರು. 13) ಸಂಗಲಾದ್ ಸಾವಿತ್ರಿ ಶೇಖರಪ್ಪ, ಯಲ್ಲಾಪುರ, ಉತ್ತರ ಕನ್ನಡ, 14) ಹರ್ಷಿತ ಹೆಚ್.ಡಿ. ಬೆಂಗಳೂರು. 15) ರಾಜಶೇಖರ್ ಬಿ.ಹೆಚ್. ಬೆಂಗಳೂರು, 16) ಶಶಾಂಕ್ ಆರ್. ಬೆಂಗಳೂರು, 17) ರಕ್ಷಿತ್ ಬಿ, ಬೆಂಗಳೂರು, 18) ಪೃಥ್ವಿರಾಜ್, ತುಮಕೂರು, 19) ಚೈತ್ರಶ್ರೀ ಎನ್. ಬೆಂಗಳೂರು, 20) ಪೂಜ ಜಿ, ಬೆಂಗಳೂರು. 21) ಸೌಮ್ಯ ಜಿ, ಬೆಂಗಳೂರು, 22) ಚಂದ್ರಕಲಾ ಬಿ. ಬೆಂಗಳೂರು. 23) ಅಜಯ್ ಕುಮಾರ್, ಬೆಂ.

ಈ ಎಲ್ಲಾ ರೋವರ್ಸ್-ರೇಂಜರ್ಸ್‌ಗಳಿಗೆ ರಾಜ್ಯ ಸಂಸ್ಥೆಯ ವತಿಯಿಂದ ಅಭಿನಂದನೆಗಳು. ತರಬೇತಿ ನೀಡಿದ ಬೆಂಗಳೂರು ಅಮಚೂರ್ ರೇಡಿಯೋ ಕ್ಲಬ್‌ನ ಅಧ್ಯಕ್ಷರಾದ ಶ್ರೀ ರಾಮ ಮೋಹನ್, ಕಾರ್ಯದರ್ಶಿ ಶ್ರೀ ಕಿರಣ್ ಹಾಗೂ ಇತರ ಪದಾಧಿಕಾರಿಗಳಿಗೆ ಕೃತಜ್ಞತೆಗಳು.

# ರಾಜ್ಯ ಮಟ್ಟದ ದಳ ನಾಯಕರುಗಳ ತರಬೇತಿ ಶಿಬಿರಗಳು

ದಿನಾಂಕ : 22.07.2016 ರಿಂದ 28.07.2016 ರವರೆಗೆ ಡಾ. ಅನಿಬೆಸೆಂಟ್ ಸ್ಕೌಟ್ಸ್-ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ ದೊಡ್ಡಬಳ್ಳಾಪುರದಲ್ಲಿ ರಾಜ್ಯಮಟ್ಟದ ಈ ಕೆಳಕಂಡ ತರಬೇತಿ ಶಿಬಿರಗಳನ್ನು ಹಮ್ಮಿಕೊಳ್ಳಲಾಗಿತ್ತು. ವಿವರಗಳು ಕೆಳಕಂಡಂತಿವೆ.

| ಕ್ರ. ಸ. | ತರಬೇತಿಗಳು | ಭಾಗವಹಿಸಿದವರ ಸಂಖ್ಯೆ | ಶಿಬಿರದ ನಾಯಕರುಗಳು ಮತ್ತು ಸಿಬ್ಬಂದಿ ವರ್ಗ |
|---|---|---|---|
| 1. | ಕಬ್ ಮಾಸ್ಟರ್ಸ್‌ಗಳ ಮುಂದುವರೆದ ತರಬೇತಿ ಶಿಬಿರ<br>ದಿನಾಂಕ 22 ರಿಂದ 28 ಜುಲೈ 2016 | 12 | ಶ್ರೀಮತಿ ರಾಧಮ್ಮ ಎಲ್.ಟಿ.(ಸಿ) ನಾಯಕಿ, ಶ್ರೀ ಎನ್. ಕೃಷ್ಣಮೂರ್ತಿ ಎ.ಎಲ್.ಟಿ.(ಸಿ) ಶ್ರೀಮತಿ ಸರಸ್ವತಿ ಸುರೇಶ್ ಹೆಚ್.ಡಬ್ಲ್ಯೂ.ಬಿ.(ಸಿ) |
| 2. | ರೋವರ್ಸ್ ಸ್ಕೌಟ್ ಲೀಡರ್ಸ್‌ಗಳ ಮುಂದುವರೆದ ತರಬೇತಿ ಶಿಬಿರ<br>ದಿನಾಂಕ 22 ರಿಂದ 28 ಜುಲೈ 2016 | 30 | ಶ್ರೀ ಎ.ಎನ್. ನರೇಂದ್ರಕುಮಾರ್ ಎ.ಎಲ್.ಟಿ.(ಆರ್), ನಾಯಕ<br>ಶ್ರೀಎಲ್.ಟಿ. ಲೋಕೇಶ್, ಎಸ್.ಟಿ.ಸಿ.(ಎಸ್) ಶ್ರೀಬೋರೇಗೌಡ, ಆರ್.ಎಸ್.ಎಲ್.<br>ಶ್ರೀ ಶಿವರಾಜ್, ಆರ್.ಎಸ್.ಎಲ್. ಶ್ರೀ ಲೋಕೇಶ್ ಎಸ್.ರೋವರ್ |
| 3. | ಅಗ್ರಗಾಮಿತ್ವ-ಅಂದಾಜಿಸುವಿಕೆ ಶಿಬಿರ (ಸ್ಕೌಟ್ಸ್ ಮತ್ತು ಗೈಡ್ಸ್ ವಿಭಾಗ)<br>ದಿನಾಂಕ 24 ರಿಂದ 28 ಜುಲೈ 2016 | ಸ್ಕೌಟರ್ಸ್ 30<br>ಗೈಡರ್ಸ್ 38<br>ಒಟ್ಟು 68 | ಶ್ರೀ ಜಿಮ್ಮಿಸಿಕ್ವೇರಾ ಎಲ್.ಟಿ.(ಎಸ್) ನಾಯಕ, ಶ್ರೀ ಆನಂದ ಅಡಿಗ, ಎಲ್.ಟಿ.(ಎಸ್)<br>ಶ್ರೀಮತಿ ಎನ್.ಕೆ. ಛಾಯಾ |
| 4 | ನಕ್ಷೆ ತಯಾರಿಕೆ-ನಕ್ಷತ್ರ ವೀಕ್ಷಣೆ ಶಿಬಿರ (ಸ್ಕೌಟ್ಸ್ ಮತ್ತು ಗೈಡ್ಸ್ ವಿಭಾಗ)<br>ದಿನಾಂಕ 24 ರಿಂದ 28 ಜುಲೈ 2016 | ಸ್ಕೌಟರ್ಸ್ 37<br>ಗೈಡರ್ಸ್ 16<br>ಒಟ್ಟು 53 | ಶ್ರೀ ಎನ್. ಶ್ರೀನಿವಾಸನ್ ಎಲ್.ಟಿ.(ಎಸ್), ನಾಯಕ<br>ಶ್ರೀ ಪಿ.ಮಂಜುನಾಥಪ್ಪ ಎಲ್.ಟಿ.(ಎಸ್), ಶ್ರೀ ಬಾಲಕೃಷ್ಣ ಹೆಚ್.ಡಬ್ಲ್ಯೂ.ಬಿ.(ಎಸ್),<br>ಜ್ಯೋತಿ ಪಿ. ಆಸಂಗಿ, ಹೆಚ್.ಡಬ್ಲ್ಯೂ. ಬಿ (ಗೈ) |
| 5. | ಫ್ಲಾಕ್ ಲೀಡರ್ಸ್‌ಗಳ ಮೂಲ ತರಬೇತಿ ಶಿಬಿರ<br>ದಿನಾಂಕ 22 ರಿಂದ 28 ಜುಲೈ 2016 | 25 | ನಾಯಕಿ-ಶ್ರೀಮತಿ ಸಿದ್ದಮ್ಮ ಎ.ಎಲ್.ಟಿ.(ಬಿ).<br>ಸಹಾಯಕಿಯಾಗಿ - ಶ್ರೀಮತಿ ಎಂ.ಎನ್. ನಾಗರತ್ನಮ್ಮ ಎ.ಎಲ್.ಟಿ.(ಬಿ.) |
| 6. | ಗೈಡ್ ಮುಂದುವರೆದ ತರಬೇತಿ ಶಿಬಿರ<br>ದಿನಾಂಕ 22 ರಿಂದ 28 ಜುಲೈ 2016 | 36 | ನಾಯಕಿ :- ಶ್ರೀಮತಿ ಗೀತಾ ನಟರಾಜ್ ಎಲ್.ಟಿ.(ಜಿ)<br>ಶ್ರೀಮತಿ ಮೈಥಿಲಿರಾವ್, ಹೆಚ್.ಡಬ್ಲ್ಯೂ.ಬಿ.(ಜಿ)<br>ಶ್ರೀಮತಿ ಸುಮನ್ ಶೇಖರ್, ಹೆಚ್.ಡಬ್ಲ್ಯೂ.ಬಿ.(ಜಿ) |

ಶ್ರೀ ಎಲ್.ಟಿ. ಲೋಕೇಶ್, ರಾಜ್ಯ ತರಬೇತಿ ಆಯುಕ್ತರು (ಸ್ಕೌಟ್ಸ್) ಮತ್ತು ಶ್ರೀಮತಿ ಕೆ.ವಿ. ಶ್ಯಾಮಲ, ಇವರ ಮೇಲ್ವಿಚಾರಣೆಯಲ್ಲಿ ಶಿಬಿರದ ದಿನಚರಿಯಂತೆ ದಿನನಿತ್ಯದ ಚಟುವಟಿಕೆಗಳು ಎಲ್ಲ ಶಿಬಿರಗಳಲ್ಲಿಯೂ ನಡೆದವು. ರೋವರ್ಸ್ ಸ್ಕೌಟ್ ಲೀಡರ್ಸ್ ತರಬೇತಿಯಲ್ಲಿ ದಿನಾಂಕ 26-07-2016 ರಂದು ಹೊರ ಸಂಚಾರ ಕಾರ್ಯಕ್ರಮವನ್ನು ಬನ್ನಿಮಂಗಲ ಶ್ರೀ ಆಂಜನೇಯ ದೇವಸ್ಥಾನದವರೆಗೆ ಹಮ್ಮಿಕೊಳ್ಳಲಾಗಿತ್ತು. ಪಯನಿಯರಿಂಗ್ ಶಿಬಿರದಲ್ಲಿ ವಿವಿಧ ರೀತಿಯ ಪಯನಿಯರಿಂಗ್ ಪ್ರಾಜೆಕ್ಟ್ ಮುಂತಾದವುಗಳನ್ನು ಮಾಡುವ ಕುರಿತು ಶಿಬಿರಾರ್ಥಿಗಳಿಗೆ ತರಬೇತಿ ನೀಡಿ ಶಿಬಿರಾರ್ಥಿಗಳೇ ಪ್ರಾಜೆಕ್ಟ್‌ಗಳನ್ನು ನಿರ್ಮಿಸಿದ್ದರು. ನಕ್ಷೆ ತಯಾರಿಕೆ ಶಿಬಿರದಲ್ಲಿ ನಕ್ಷೆ ಎಂದರೇನು, ಕಂಪಾಸ್ ಮತ್ತು ದಿಕ್ಕುಗಳ ಬಗ್ಗೆ, ಶಿಬಿರಾರ್ಥಿಗಳಿಗೆ ತರಬೇತಿ ನೀಡಲಾಯಿತು. ದಿನಾಂಕ 26-07-2016 ರಂದು ರಾಜ್ಯ ಕಾರ್ಯದರ್ಶಿಗಳಾದ ಶ್ರೀ ಚಿನ್ನಸ್ವಾಮಿ ರೆಡ್ಡಿರವರು ಶಿಬಿರಕ್ಕೆ ಭೇಟಿ ನೀಡಿದ್ದರು.

ದಿನಾಂಕ : 27-07-2016 ರಂದು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯರವರು ಶಿಬಿರಕ್ಕೆ ಭೇಟಿ ನೀಡಿ ಸಮಾರೋಪ ಸಮಾರಂಭದಲ್ಲಿ ಭಾಗವಹಿಸಿ ಮಾತನಾಡುತ್ತಾ ಜೀವನದಲ್ಲಿ ಶಿಕ್ಷಣ ಮತ್ತು ಕಲಿಕೆ ನಿರಂತರವಾದುದು.

ಶಿಕ್ಷಕರು ಕಲಿಯುವ ಆಸಕ್ತಿಯಿಂದ ರೂಡಿಸಿಕೊಳ್ಳಬೇಕೆಂದು ತಿಳಿಸಿದರು ಮತ್ತು ಸ್ಕೌಟ್ ಸಂಸ್ಥೆಯಲ್ಲಿ ತಮಗೆ ನೂತನ ಪ್ರಪಂಚದ ಅರಿವಾಗುತ್ತಿದೆ ಪ್ಯಾಟ್ರೋಲ್ ಪದ್ಧತಿಯು ಪ್ರಜಾಪ್ರಭುತ್ವದ ಬುನಾದಿಯಾಗುತ್ತದೆ. ಮೈಸೂರಿನಲ್ಲಿ ನಡೆಯುವ ರಾಷ್ಟ್ರೀಯ ಜಾಂಬೂರಿ ಬಗ್ಗೆ ವಿವರವಾಗಿ ಮಾಹಿತಿ ನೀಡಿ ಎಲ್ಲರೂ ಭಾಗವಹಿಸಲು ಕರೆನೀಡಿದರು. ದಿನಾಂಕ 28-07-2016 ರಂದು ಬೆಳಗ್ಗೆ ಸರ್ವಧರ್ಮ ಪ್ರಾರ್ಥನೆ ಕಾರ್ಯಕ್ರಮವನ್ನು ಕೊಂಡಜ್ಜಿ ಬಸಪ್ಪ ಭವನದಲ್ಲಿ ಏರ್ಪಡಿಸಲಾಗಿತ್ತು.

## ರಾಜ್ಯ ಪುರಸ್ಕಾರ ಸ್ಕೌಟ್ಸ್ ರೋವರ್ಸ್ ಮತ್ತು ರೇಂಜರ್ಸ್ ಪರೀಕ್ಷಾ ಶಿಬಿರ

ದಿನಾಂಕ : 28-06-2016 ರಿಂದ 02-07-2016 ರ ವರೆಗೆ ರಾಜ್ಯ ಪುರಸ್ಕಾರ ರೋವರ್ಸ್ ಮತ್ತು ರೇಂಜರ್ಸ್ ಪರೀಕ್ಷಾ ಶಿಬಿರ ಡಾ. ಅನಿಬೆಸೆಂಟ್ ಸ್ಕೌಟ್ಸ್-ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ ದೊಡ್ಡಬಳ್ಳಾಪುರದಲ್ಲಿ ಜರುಗಿತು. 14 ಜಿಲ್ಲೆಗಳಿಂದ ಒಟ್ಟು 122 ರೋವರ್ಸ್ ಹಾಗೂ 7 ಪರೀಕ್ಷಕರಾಗಿ ಭಾಗವಹಿಸಿದ್ದರು. ರೇಂಜರ್ಸ್ ವಿಭಾಗದಲ್ಲಿ 140 ರೇಂಜರ್ಸ್, 3 ರೇಂಜರ್ ಲೀಡರ್‌ಗಳು ಭಾಗವಹಿಸಿದ್ದರು.

ಶ್ರೀ ಎ.ಎಂ. ಶಂಕರ್ ಎಲ್.ಟಿ.(ಆರ್), ಶಿಬಿರದ ರೋವರ್ ವಿಭಾಗದ ನಾಯಕರಾಗಿ ಕಾರ್ಯ ನಿರ್ವಹಿಸಿದ್ದರು. ಶ್ರೀ ಎಂ. ಪ್ರಭಾಕರ್ ಭಟ್ ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್ಸ್) ಶಿಬಿರ ಸಂಯೋಜಕರಾಗಿ ಕಾರ್ಯ ನಿರ್ವಹಿಸಿದ್ದರು. ಶ್ರೀ ಪಿ.ಜಿ.ಆರ್. ಸಿಂಧ್ಯ ರಾಜ್ಯ ಮುಖ್ಯ ಆಯುಕ್ತರು ಶ್ರೀ ಸಿ.ಎಸ್. ರೆಡ್ಡಿ, ರಾಜ್ಯ ಕಾರ್ಯದರ್ಶಿಗಳು, ಶ್ರೀ ಗಂಗಪ್ಪಗೌಡ, ಸಹಾಯಕ ರಾಜ್ಯ ಆಯುಕ್ತರು, (ಸ್ಕೌಟ್ಸ್), ಶ್ರೀಮತಿ ಎಸ್.ಕೆ. ಪ್ರಭಾ ಎಲ್.ಟಿ.(ಗೈಡ್ಸ್) ರಾಜ್ಯ ಜಂಟಿ ಕಾರ್ಯದರ್ಶಿ (ಗೈಡ್ಸ್) ಶಿಬಿರಕ್ಕೆ ಭೇಟಿ ನೀಡಿ ರೋವರ್‌ಗಳಿಗೆ ಶುಭ ಹಾರೈಸಿದರು. ಶಿಬಿರ ಕೇಂದ್ರದಲ್ಲಿ ವನಮಹೋತ್ಸವ ಕಾರ್ಯಕ್ರಮವನ್ನು ಸಂಘಟಿಸಲಾಯಿತು.

ಶ್ರೀಮತಿ ಶಾಂತಕುಮಾರಿ ಹಿಮಾಲಯ ವುಡ್ ಬ್ಯಾಡ್ಜ್ (ರೇ) ರೇಂಜರ್ ವಿಭಾಗದ ನಾಯಕರಾಗಿ ಭಾಗವಹಿಸಿದ್ದರು. ಶ್ರೀಮತಿ ಮಂಜುಳಾ ಸಿ. ರಾಜ್ಯ ಸಂಘಟನಾ ಆಯುಕ್ತರು(ಗೈಡ್ಸ್) ಸಂಯೋಜಕರಾಗಿ ಕಾರ್ಯನಿರ್ವಹಿಸಿದ್ದರು.

ಇದೇ ಸಂದರ್ಭದಲ್ಲಿ ರಾಜ್ಯ ಪುರಸ್ಕಾರ ಸ್ಕೌಟ್ಸ್ ಪರೀಕ್ಷಾ ಶಿಬಿರ ಸಂಘಟಿಸಲಾಗಿದ್ದು 10 ಜಿಲ್ಲೆಗಳಿಂದ 162 ಸ್ಕೌಟ್ಸ್, 20 ಸ್ಕೌಟ್ ಮಾಸ್ಟರ್ಸ್, 10 ಪರೀಕ್ಷಕರು ಭಾಗವಹಿಸಿದ್ದರು. ಶ್ರೀ ಬಿ. ಆನಂದ ಅಡಿಗ ಎಲ್.ಟಿ.(ಎಸ್) ಶಿಬಿರದ ನಾಯಕರಾಗಿದ್ದರು.

Hearty Congratulations

Rio2016

The whole Karnataka Scout-Guide Fraternity Heartily Congratulates

Miss. P.V. Sindhu (Silver in Women's Badminton)
Miss. Sakshi Mallik (Bronze in Women's Wrestling)
Miss. Deepa Karmakar (Fourth Place in Women's Gymnastics)

for their Best Performances in the Rio Olympics and upholding India's Pride at the World level

# ವಿಪತ್ತು ನಿರ್ವಹಣಾ ತರಬೇತಿ ಶಿಬಿರ

ದೇವರ ಮೇಲೆ ಭಾರ ಹಾಕಿ ಏನೂ ತೊಂದರೆಯಾಗದೆನ್ನುವ ಭಾರತೀಯರ ಅಚಲ ವಿಶ್ವಾಸದಿಂದಾಗಿ, ವಿಪತ್ತುಗಳನ್ನು ಎದುರಿಸಲು ಯಾವ ತಯಾರಿ ಮಾಡದಿರುವುದೇ ಪ್ರಾಕೃತಿಕ ವಿಕೋಪ ಸಂದರ್ಭ ಹೆಚ್ಚಿನ ಆಸ್ತಿಪಾಸ್ತಿ, ಜೀವ ಹಾನಿಗೆ ಮುಖ್ಯ ಕಾರಣ ಎಂದು ಉಡುಪಿ ಜಿಲ್ಲಾ ಉಸ್ತುವಾರಿ ಸಚಿವ ಶ್ರೀ ಪ್ರಮೋದ್ ಮಧ್ವರಾಜ್ ಹೇಳಿದರು.

ಅವರು ಭಾರತ್ ಸ್ಕೌಟ್ ಮತ್ತು ಗೈಡ್ಸ್, ಕರ್ನಾಟಕ ರಾಜ್ಯ ಸಂಸ್ಥೆ ಉಡುಪಿ ಜಿಲ್ಲಾ ಸಂಸ್ಥೆ ಹಾಗು ಜಿಲ್ಲಾಡಳಿತ ವತಿಯಿಂದ ಅಲೆವೂರು ಪ್ರಗತಿ ನಗರದಲ್ಲಿರುವ ಡಾ. ವಿ.ಎಸ್. ಆಚಾರ್ಯ ತರಬೇತಿ ಕೇಂದ್ರದಲ್ಲಿ ನಡೆದ ಪ್ರಾಕೃತಿಕ ವಿಕೋಪ ನಿರ್ವಹಣೆ ಮತ್ತು ಸ್ವಚ್ಛತಾ ಆಂದೋಲನ ತರಬೇತಿ ಕಾರ್ಯಾಗಾರವನ್ನು ಉದ್ಘಾಟಿಸಿ ಮಾತನಾಡಿದರು. ಭಾರತ್ ಸ್ಕೌಟ್ಸ್–ಗೈಡ್ಸ್ ಉಡುಪಿ ಜಿಲ್ಲಾಧ್ಯಕ್ಷ ಹಾಗೂ ಜಿಲ್ಲಾಧಿಕಾರಿ ಶ್ರೀ ಪಿ. ವೆಂಕಟೇಶ್ ಅಧ್ಯಕ್ಷತೆ ವಹಿಸಿದ್ದರು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಸಂಸ್ಥೆ ಉಪಾಧ್ಯಕ್ಷೆ ಶ್ರೀಮತಿ ಶಾಂತ ವಿ. ಆಚಾರ್ಯ, ರಾಜ್ಯ ಸಂಘಟನಾ ಆಯುಕ್ತ ಶ್ರೀ ಪ್ರಭಾಕರ ಎಂ. ಭಟ್, ಉಪಾಧ್ಯಕ್ಷೆ ಶ್ರೀಮತಿ ಜ್ಯೋತಿ ಪೈ, ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಕೆ.ಬಿ. ರಾವ್, ಜಿಲ್ಲಾ ಸ್ಕೌಟ್ಸ್ ಆಯುಕ್ತ ಶ್ರೀ ಎಡ್ವಿನ್ ಆಳ್ವ, ಜಿಲ್ಲಾ ಗೈಡ್ ಆಯುಕ್ತ ರಾಜಲಕ್ಷ್ಮೀ ಡಿ. ಶೆಟ್ಟಿ, ಕುಂದಾಪುರ ಉಪ ವಿಭಾಗದ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಶ್ರೀ ಸತೀಶ್ ಬಾಬಾ ರೈ ಇದ್ದರು.

ಉಡುಪಿ ಜಿಲ್ಲಾ ಕಾರ್ಯದರ್ಶಿ ಶ್ರೀ ಶೇಖರ್ ಕಲ್ಮಾಡಿ ಸ್ವಾಗತಿಸಿದರು. ಶ್ರೀ ಪ್ರವೀಣ್ ಕುಮಾರ್ ಶಿಬಿರದ ಪಕ್ಷಿ ನೋಟ ನೀಡಿದರು. ಡಾ. ಪ್ರಭಾಗ್ ಕಲ್ಕೂರ ಪ್ರಾಸ್ತಾವಿಕ ಮಾತನ್ನಾಡಿದರು. ಶ್ರೀಮತಿ ಸವಿತಾ ಜೋಗಿ ನಿರೂಪಿಸಿದರು.

ಇದೇ ಸಂದರ್ಭದಲ್ಲಿ ಸರಣಿ ಬಾಂಬ್ ಸ್ಫೋಟದ ಸಂದರ್ಭದಲ್ಲಿ ಕೈಗೊಳ್ಳಬಹುದಾದ ಕ್ರಮಗಳ ಕುರಿತು ಜಿಲ್ಲಾ ಅಗ್ನಿಶಾಮಕ ಇಲಾಖೆ, ಗೃಹ ರಕ್ಷಕ ದಳ, ಆರೋಗ್ಯ ಇಲಾಖೆ, ಪೊಲೀಸ್ ಇಲಾಖೆಯ ಸಹಯೋಗದಲ್ಲಿ ಅಣಕು ಕಾರ್ಯಾಚರಣೆ ನಡೆಯಿತು.

ಅಗ್ನಿಶಾಮಕ ಅಧಿಕಾರಿ ಶ್ರೀ ವಸಂತ್ ಕುಮಾರ್ ಮಾತನಾಡಿ, ಸ್ಫೋಟದ ಸಂದರ್ಭದಲ್ಲಿ ಅಗ್ನಿಶಾಮಕ ಇಲಾಖೆಗೆ ಮೊದಲು ಮಾಹಿತಿ ನೀಡಿ, ನಂತರ ಆರೋಗ್ಯ ಮತ್ತು ಪೊಲೀಸ್ ಇಲಾಖೆಗೆ ಮಾಹಿತಿ ನೀಡಿ ಕಾರ್ಯಾಚರಣೆ ನಡೆಯುವ ರೀತಿಯಲ್ಲಿ ತೋರಿಸಿ, ನಂತರ ಬಾಂಬ್ ಸ್ಫೋಟದ ಸಮಯದಲ್ಲಿ ಕೈಗೊಳ್ಳಬಹುದಾದ ಕ್ರಮಗಳ ಬಗ್ಗೆ ತಿಳಿಸಿದರು. ಜಿಲ್ಲಾ ಗೃಹ ರಕ್ಷಕ ದಳದ ಡೆಪ್ಯುಟಿ ಕಮಾಡೆಂಟ್ ರಮೇಶ್, ಡಾ. ಪ್ರಭಾಗ್ ಕಲ್ಕೂರ ಉಪಸ್ಥಿತರಿದ್ದರು.

ಈ ಶಿಬಿರದಲ್ಲಿ ಉಡುಪಿ, ದಕ್ಷಿಣಕನ್ನಡ, ಕಾರವಾರ, ಶಿವಮೊಗ್ಗ, ಚಿಕ್ಕಮಗಳೂರು, ಮೈಸೂರು, ಕೊಡಗು ಜಿಲ್ಲೆಗಳಿಂದ 101 ರೋವರ್ಸ್, 107 ರೇಂಜರ್ಸ್, 15 ಸಿಬ್ಬಂದಿ ವರ್ಗದವರು ಭಾಗವಹಿಸಿದ್ದರು. ಶ್ರೀ ಪ್ರತಿಮ್ ಕುಮಾರ್ ರೋವರ್ ವಿಭಾಗಕ್ಕೆ, ಶ್ರೀಮತಿ ಜ್ಯೋತಿ ಆಚಾರ್ಯ, ಉಡುಪಿ ಇವರು ರೇಂಜರ್ ವಿಭಾಗಕ್ಕೆ ನಾಯಕರಾಗಿ ಕಾರ್ಯನಿರ್ವಹಿಸಿದ್ದರು.



# ಜಿಲ್ಲಾ ವಾರ್ತೆಗಳು

## ಬೀದರ



ದಿನಾಂಕ 09 ರಿಂದ 15 ಆಗಸ್ಟ್ 2016 ರವರೆಗೆ ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಆಶ್ರಯದಲ್ಲಿ ಸ್ವಾತಂತ್ರ್ಯೋತ್ಸವ ಪರೇಡ್‌ನ ಪೂರ್ವಸಿದ್ದತಾ ಶಿಬಿರ ಹಾಗೂ ಪ್ರಾವೀಣ್ಯತಾ ಪದಕ ಶಿಬಿರ ಆಯೋಜಿಸಲಾಗಿತ್ತು. ಈ ಶಿಬಿರದಲ್ಲಿ ಬಿದರ ನಗರದ 160 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ದಿನಾಂಕ 15-08-2016 ರಂದು ಸ್ವಾತಂತ್ರ್ಯೋತ್ಸವದ ಅಂಗವಾಗಿ ಮಾನ್ಯ ಜಿಲ್ಲಾ ಸಚಿವರಾದ ಶ್ರೀ ಈಶ್ವರ ಖಂಡ್ರೆಯವರು ಧ್ವಜಾರೋಹಣ ನೆರವೇರಿಸಿದರು. ಈ ಸಮಯದಲ್ಲಿ ಪಥಸಂಚಲನವನ್ನು ಉತ್ತಮವಾಗಿ ಮಾಡಿದ ಸ್ಕೌಟ್ಸ್ ವಿಭಾಗವನ್ನು ಸನ್ಮಾನಿಸಲಾಯಿತು.

ಒಳಾಂಗಣ ಕ್ರೀಡಾಂಗಣದಲ್ಲಿ ಮಾನ್ಯ ಸಚಿವರಿಂದ ಸಸಿ ನೆಡುವ ಕಾರ್ಯಕ್ಕೆ ಚಾಲನೆ ನೀಡಿ ಸ್ಕೌಟ್ಸ್-ಗೈಡ್ಸ್ ಮಕ್ಕಳಿಗೆ ಮಾನ್ಯ ಸಚಿವರು ಸಸಿಗಳನ್ನು ವಿತರಿಸಿದರು. ಈ ಸಮಾರಂಭದಲ್ಲಿ ಡಾ॥ ಎಚ್.ಬಿ. ಭರಶೆಟ್ಟಿ ಹಾಗು ರಾಚಯ್ಯ ನಾಸಿ ಅವರು ನೇತೃತ್ವ ವಹಿಸಿದರು.

## ಚಾಮರಾಜನಗರ



ದಿನಾಂಕ 04-06-2016 ರಂದು ಜಿಲ್ಲಾಡಳಿತ ಭವನ ಚಾಮರಾಜನಗರದಲ್ಲಿ ಕೋಟಿವೃಕ್ಷ ಅಭಿಯಾನದಡಿಯಲ್ಲಿ ಸಸಿ ನೆಡುವ ಕಾರ್ಯಕ್ರಮ ಜರುಗಿತು. ಜಿಲ್ಲಾಧಿಕಾರಿಗಳಾದ ಶ್ರೀ ರಾಮುರವರು ಸಸಿನೆಡುವ ಮೂಲಕ ಕಾರ್ಯಕ್ರಮವನ್ನು ಉದ್ಘಾಟಿಸಿದರು. ಎ.ಡಿ.ಸಿ., ಶ್ರೀಮತಿ ಭಾರತಿ, ಸಿ.ಇ.ಓ., ಶ್ರೀಮತಿ ಹೆಬ್ಸಿಬಾ ರಾಣಿ, ಡಿ.ಡಿ.ಪಿ.ಯು, ಶ್ರೀ ಚಂದ್ರಕಾಂತ್, ಡಿ.ಡಿ.ಪಿ.ಐ., ಶ್ರೀಮತಿ ಮಮತ, ಶ್ರೀ ವಿ.ಎಂ. ರಾಮಚಂದ್ರ, ಜಿಲ್ಲಾ ಕಾರ್ಯದರ್ಶಿ, ಶ್ರೀಮತಿ ಪಿ. ಕಮಲಮ್ಮ, ಡಿ.ಓ., ಶ್ರೀ ಎನ್. ಅಶೋಕಕುಮಾರ್, ಸ್ಕೌಟರ್ಸ್-ಗೈಡರ್ಸ್, ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

* ದಿನಾಂಕ 27-07-2016 ರಿಂದ 29-07-2016 ರವರೆಗೆ ಶ್ರೀ ರಾಜರಾಜೇಶ್ವರಿ ಕಲ್ಯಾಣ ಮಂಟಪ, ಕೊಳ್ಳೇಗಾಲದಲ್ಲಿ ಸ್ಕೌಟ್ಸ್-ಗೈಡ್ಸ್‌ಗಳಿಗೆ ದ್ವಿತೀಯ-ತೃತೀಯ ಸೋಪಾನ, ಕಬ್ಸ್‌ಗಳಿಗೆ ದ್ವಿತೀಯ-ತೃತೀಯ ಚರಣ, ಬುಲ್‌ಬುಲ್ಸ್‌ಗಳಿಗೆ ರಜತ ಪಂಕ್, ರೋವರ್‌ಗಳಿಗೆ ನಿಪುಣ್ ಅವಾರ್ಡ್ ತರಬೇತಿ ಹಾಗೂ ಪರೀಕ್ಷಾ ಶಿಬಿರ ಜರುಗಿತು. ಪರೀಕ್ಷಾ ಶಿಬಿರದಲ್ಲಿ ಸ್ಕೌಟ್‌ಗಳು 222, ಗೈಡ್ಸ್ 102, ಕಬ್ಸ್ 44, ಬುಲ್ ಬುಲ್ಸ್‌ಗಳು 44, ರೋವರ್ಸ್ 31, ಸಂಪನ್ಮೂಲ ವ್ಯಕ್ತಿಗಳು 24, ಸರ್ವಿಸ್ ರೋವರ್ಸ್ 7, ರೇಂಜರ್ಸ್ 02, ಶಿಕ್ಷಕ-ಶಿಕ್ಷಕಿಯರು 28, ಒಟ್ಟು 504 ಭಾಗವಹಿಸಿದ್ದರು.

ಪಠ್ಯ ಪುಸ್ತಕದನ್ವಯ ಮೂರು ದಿವಸಗಳಲ್ಲಿ ವಿಷಯ ಭೋದಿಸಿ ಪರೀಕ್ಷೆ ನಡೆಸಲಾಯಿತು. ಈ ಕಾರ್ಯಕ್ರಮದಲ್ಲಿ ದಿನಾಂಕ 27-07-2016 ರಂದು ಉದ್ಘಾಟನೆ ಸಮಾರಂಭ ಮತ್ತು ದಿನಾಂಕ 29-07-2016 ರಂದು ಸರ್ವಧರ್ಮ ಹಾಗು ಮುಕ್ತಾಯ ಸಮಾರಂಭವು ಜರುಗಿತು.

## ಚಿಕ್ಕಮಗಳೂರು

ದಿನಾಂಕ : 15-06-2016 ರಂದು ಜಿಲ್ಲಾ ಸ್ಕೌಟ್ಸ್ ಭವನದಲ್ಲಿ ಜಿಲ್ಲೆಯ ಪದವಿ ಪೂರ್ವ ಹಾಗೂ ಪದವಿ ಕಾಲೇಜುಗಳ ರೇಂಜರ್ಸ್-ರೋವರ್ಸ್ ಘಟಕಗಳ ನಾಯಕರುಗಳ ಸಭೆಯನ್ನು ಜಿಲ್ಲಾ ಸ್ಕೌಟ್ಸ್ ಆಯುಕ್ತ ಶ್ರೀ ಎ.ಎನ್. ಮಹೇಶ್ ರವರ ಅಧ್ಯಕ್ಷತೆಯಲ್ಲಿ ನಡೆಸಲಾಯಿತು.

ಅಧ್ಯಕ್ಷತೆ ವಹಿಸಿದ್ದ ಜಿಲ್ಲಾ ಆಯುಕ್ತ ಶ್ರೀ ಎ.ಎನ್. ಮಹೇಶ್ ಮಾತನಾಡುತ್ತಾ ಜಿಲ್ಲೆಯಲ್ಲಿ ವಿವಿಧ ಹಂತಗಳಲ್ಲಿ 8 ಸಾವಿರ ಸ್ಕೌಟ್-ಗೈಡ್‌ಗಳು ತರಬೇತಿಯನ್ನು ಹೊಂದುತ್ತಿದ್ದು ಇಂದಿನವರೆಗೆ ಹೆಚ್ಚು ಪ್ರೌಢಶಾಲೆವರೆಗೆ ಆದ್ಯತೆ ನೀಡಲಾಗಿದ್ದು, ಈಗ ನಮ್ಮ ಚಳುವಳಿಯನ್ನು ತೀವ್ರಗೊಳಿಸುವ ದೃಷ್ಟಿಯಿಂದ ಪದವಿಪೂರ್ವ ಹಾಗೂ ಪದವಿ ಕಾಲೇಜುಗಳಲ್ಲಿ ರೋವರ್ಸ್ ಮತ್ತು ರೇಂಜರ್ಸ್ ಘಟಕಗಳನ್ನು ಪ್ರಾರಂಭಿಸುತ್ತಿದ್ದು ಜಿಲ್ಲೆಯಲ್ಲಿ 84 ಪದವಿಪೂರ್ವ ಹಾಗೂ 24 ಪದವಿ ಕಾಲೇಜುಗಳಿದ್ದು ಅದರಲ್ಲಿ 12 ಘಟಕಗಳು ಈಗಾಗಲೇ ಪ್ರಾರಂಭವಾಗಿ ಕ್ರಿಯಾಶೀಲವಾಗಿ ಕಾರ್ಯ ನಿರ್ವಹಿಸುತ್ತಿವೆ. ಮುಂದಿನ ವರ್ಷದಗೊಳಗೆ ಎಲ್ಲಾ ಪದವಿ ಪೂರ್ವ ಹಾಗೂ ಪದವಿ ಕಾಲೇಜುಗಳಲ್ಲಿ ರೇಂಜರ್ಸ್-ರೋವರ್ಸ್ ಘಟಕಗಳನ್ನು ಪ್ರಾರಂಭಿಸಲು ಉದ್ದೇಶಿಸಲಾಗಿದೆ ಎಂದರು.

ಸಭೆಗೆ ಆಗಮಿಸಿದ್ದ ಶ್ರೀ ರಾಜೇಶ್ ಅವಲಕ್ಕಿಯವರು 2016-17ನೇ ಕ್ರಿಯಾ ಯೋಜನೆಯನ್ನು ತಯಾರಿಸಲು ಮಾಹಿತಿ ನೀಡಿ ಪರಿಸರ ಅಧ್ಯಯನ, ಚಾರಣ, ಜನಜಾಗೃತಿ ಮೂಡಿಸಲು ಸೈಕಲ್ ಜಾಥ, ಸ್ವಚ್ಛತಾ ಆಂದೋಲನಾ ಸೇರಿದಂತೆ ವಿವಿಧ ಕಾರ್ಯಕ್ರಮ ಆಯೋಜಿಸಲು ಮಾರ್ಗದರ್ಶನ ನೀಡಿದರು. ಸಭೆಯಲ್ಲಿ ಜಿಲ್ಲಾ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ಕಾರ್ಯದರ್ಶಿ ಶ್ರೀ ಶಶಿಧರರಾವ್, ಜಿಲ್ಲಾ ತರಬೇತಿ ಆಯುಕ್ತೆ ಶ್ರೀಮತಿ ಸಂಧ್ಯಾರಾಣಿ, ಜಿಲ್ಲಾ ಸ್ಥಾನಿಕ ಆಯುಕ್ತ ಶ್ರೀ ನೀಲಕಂಠಾಚಾರ್, ಜಿಲ್ಲಾ ಸಂಯೋಜಕ ಶ್ರೀ ಕಿರಣ್ ಕುಮಾರ್, ಕಾಲೇಜು ಘಟಕಗಳ ನಾಯಕರುಗಳು ಉಪಸ್ಥಿತರಿದ್ದರು.

* ದಿನಾಂಕ : 20-07-2016 ರಂದು ರಾಜ್ಯ ಸರ್ಕಾರದ ಮಹತ್ವಾಕಾಂಕ್ಷೆಯ ಯೋಜನೆ 'ಕೋಟಿ ವೃಕ್ಷಾಂದೋಲನದ' ಅಂಗವಾಗಿ ಗಿಡ ನೆಡುವ ಕಾರ್ಯಕ್ರಮವನ್ನು ಜಿಲ್ಲಾ ಸ್ಕೌಟ್ಸ್-ಗೈಡ್ಸ್ ಸಂಸ್ಥೆ ಹಾಗು ಅರಣ್ಯ ಇಲಾಖೆ ಸಹಯೋಗದೊಂದಿಗೆ ತೇಗೂರಿನ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ತರಬೇತಿ ಶಿಬಿರದಲ್ಲಿ ಹಮ್ಮಿಕೊಳ್ಳಲಾಗಿತ್ತು.



ಕಾರ್ಯಕ್ರಮದಲ್ಲಿ ಗಿಡಕ್ಕೆ ನೀರೆರೆಯುವುದರ ಮೂಲಕ ಚಾಲನೆ ನೀಡಿದ ಜಿಲ್ಲಾದಿಕಾರಿ ಶ್ರೀಮತಿ ಜಿ. ಸತ್ಯವತಿ ಬೆಳೆಯುವ ಮಕ್ಕಳಲ್ಲಿ ಪರಿಸರದ ಬಗ್ಗೆ ಕಾಳಜಿ ಮಾಡುವುದು ಅವಶ್ಯವಾಗಿದ್ದು ನಿಮ್ಮ ಮನೆಗಳಿಂದ ಈ ಆಂದೋಲನ ಆರಂಭವಾಗಿದ್ದು ಅದರ ಮೂಲಕ ಈ ಪರಿಸರಕ್ಕೆ ನಿಮ್ಮ ಯೋಗದಾನವಾಗಬೇಕೆಂದರು. ಸ್ಕೌಟ್ಸ್ ಮತ್ತು ಗೈಡ್ಸ್ ಸಮಾಜ ಸೇವೆಗೆ ಮುಡುಪಾಗಿರುವ ಸಂಸ್ಥೆಯಾಗಿದ್ದು ಖಾಸಗಿ ಶಾಲೆಯಲ್ಲಿ ಮಾತ್ರವಲ್ಲದೆ ಸರ್ಕಾರಿ ಶಾಲೆಯಲ್ಲಿಯೂ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಘಟಕಗಳು ಪ್ರಾರಂಭವಾಗಬೇಕು. ಜಿಲ್ಲಾ ಸಂಸ್ಥೆಯ ಅಧ್ಯಕ್ಷಳಾಗಿ ಇದಕ್ಕೆ ಬೇಕಾದ ಎಲ್ಲಾ ನೆರವನ್ನು ನೀಡಲಾಗುವುದೆಂದರು.

ಇದೇ ಸಂದರ್ಭದಲ್ಲಿ ಮಾತನಾಡಿದ ತೇಗೂರು ಗ್ರಾಮ ಪಂಚಾಯ್ತಿ ಅಧ್ಯಕ್ಷೆ ಶ್ರೀಮತಿ ಚಂದ್ರಮ್ಮ ರವರು ನನ್ನ ಪಂಚಾಯ್ತಿ ವ್ಯಾಪ್ತಿಯಿಂದ ಇಲ್ಲಿ ಇಂದು ನೆಟ್ಟಿರುವ ಗಿಡಗಳಿಗೆ ಟ್ಯಾಂಕರ್ ಮೂಲಕ ನೀರು ಪೂರೈಕೆ ಪೋಷಣೆ ಮಾಡಲಾಗುವುದೆಂದರು. ಕಾರ್ಯಕ್ರಮದಲ್ಲಿ ಜಿಲ್ಲಾ ಸ್ಕೌಟ್ಸ್ ಆಯುಕ್ತ ಶ್ರೀ ಎ.ಎನ್. ಮಹೇಶ್, ಜಿಲ್ಲಾ ಸ್ಕೌಟ್ಸ್ ಆಯುಕ್ತೆ ಶ್ರೀಮತಿ ಅನಿತಾ ನಾಗೇಂದ್ರ, ಜಿಲ್ಲಾ ಕಾರ್ಯದರ್ಶಿ ಶ್ರೀ ಶಶಿಧರರಾವ್, ಹಿರಿಯ ಸ್ಕೌಟರ್ ಶ್ರೀ ನೀಲಕಂಠಾಚಾರ್, ಜಿಲ್ಲಾ ಸ್ಕೌಟ್ಸ್ ತರಬೇತಿ ಆಯುಕ್ತೆ ಶ್ರೀಮತಿ ಸಂಧ್ಯಾರಾಣಿ, ಪದಾಧಿಕಾರಿಗಳು ಹಾಗೂ ಅರಣ್ಯ ಇಲಾಖೆ ಅಧಿಕಾರಿಗಳು ಹಾಜರಿದ್ದರು.

* ದಿನಾಂಕ 06-08-2016 ರಂದು ಜಿಲ್ಲಾ ಸ್ಕೌಟ್ಸ್ ಭವನದಲ್ಲಿ ತಾಲ್ಲುಕು ಮಟ್ಟದ ಸ್ಕೌಟರ್ಸ್-ಗೈಡರ್ಸ್ ಸಮಾವೇಶವನ್ನು ಏರ್ಪಡಿಸಲಾಗಿತ್ತು. ಶ್ರೀ ನಂದಕುಮಾರ್ ತಾಲ್ಲೂಕು ಕಾರ್ಯದರ್ಶಿ ಇವರು ಎಲ್ಲರನ್ನೂ ಸ್ವಾಗತಿಸಿ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು. ನಗರದ ಎಲ್ಲಾ ಶಾಲಾ ಕಾಲೇಜುಗಳಲ್ಲಿ ಸ್ಕೌಟ್ಸ್-ಗೈಡ್ಸ್ ತಂಡಗಳನ್ನು ಕಡ್ಡಾಯವಾಗಿ ಪ್ರಾರಂಭಿಸುವುದರಿಂದ ವಿದ್ಯಾರ್ಥಿಗಳಲ್ಲಿ ಶಿಸ್ತು, ದೇಶಪ್ರೇಮ, ಪರಿಸರ ಪ್ರಜ್ಞೆ ಬೆಳೆಯುತ್ತದೆ. ಜೊತೆಗೆ ರಾಜ್ಯಪುರಸ್ಕಾರ್, ರಾಷ್ಟ್ರಪತಿ ಪದಕ ಪಡೆಯುವುದರಿಂದ ವಿದ್ಯಾರ್ಥಿಗಳಿಗೆ ಹಲವು ಪ್ರಯೋಜನಗಳು ಲಭಿಸುತ್ತದೆ ಎಂದು ಜಿಲ್ಲಾ ಆಯುಕ್ತರಾದ ಶ್ರೀ ವಿ.ಎನ್. ಮಹೇಶ ಇವರು ತಿಳಿಸಿದರು. ತಾಲೂಕಿನ 25 ಸ್ಕೌಟ್ ಮಾಸ್ಟರ್ಸ್ 15 ಗೈಡ್ಸ್ ಕ್ಯಾಪ್ಟನ್‌ಗಳು ಭಾಗವಹಿಸಿದ್ದರು. ಈ ಸಮಾವೇಶದಲ್ಲಿ ಗೈಡ್ ಆಯುಕ್ತರಾದ ಶ್ರೀಮತಿ ಅನಿತ ನಾಗೇಂದ್ರ ಡಿ.ಟಿ.ಸಿ., ಶ್ರೀಮತಿ ಸಿ. ಸಂಧ್ಯಾರಾಣಿ, ಜಿಲ್ಲಾ ಸಂಘಟಕರಾದ ಶ್ರೀ ಬಿ.ಎನ್. ಕಿರಣ ಕುಮಾರ್ ಭಾಗವಹಿಸಿದ್ದರು. ಶ್ರೀ ನೀಲಕಂಠಾಚಾರ್ ಖಜಾಂಚಿ ಎಲ್ಲರನ್ನು ವಂದಿಸಿದರು.

## ದಕ್ಷಿಣ ಕನ್ನಡ

ದಿನಾಂಕ 09-07-2016 ರಂದು 'ವನಮಹೋತ್ಸವ-2016' ಬೃಹತ್ ಗಿಡ ನೆಡುವ ಸಪ್ತಾಹ, ಕೋಟಿವೃಕ್ಷ ಆಂದೋಲನದ ಕಾರ್ಯಕ್ರಮವನ್ನು ಮಂಗಳೂರಿನ ಪುರಭವನದಲ್ಲಿ ಹಮ್ಮಿಕೊಳ್ಳಲಾಯಿತು. ಈ ಆಂದೋಲನದ ಅಂಗವಾಗಿ ಪರಿಸರ ಜಾಥಾ, ಗಿಡನೆಡುವ ಕಾರ್ಯಕ್ರಮ ಮತ್ತು ಅರಣ್ಯ ಮಿತ್ರ ಪ್ರಶಸ್ತಿ ಪ್ರಧಾನ ಸಮಾರಂಭವು ಜರುಗಿತು. ಇದರ ಉದ್ಘಾಟನೆಯನ್ನು ಅರಣ್ಯಜೀವಿ ಪರಿಸ್ಥಿತಿ ಮತ್ತು ಪರಿಸರ ಸಚಿವರಾದ ಶ್ರೀ ಬಿ. ರಮಾನಾಥ ರೈ ಅವರು ನೆರವೇರಿಸಿಕೊಟ್ಟರು.

ಈ ಕಾರ್ಯಕ್ರಮದ ಸಭಾ ಅಧ್ಯಕ್ಷರಾಗಿ ಮಂಗಳೂರಿನ ಮೇಯರ್ ಶ್ರೀಯುತ ಹರಿನಾಥ್ ಪಾಲ್ಗೊಂಡಿದ್ದರು ಮಾನ್ಯ ಶಾಸಕ ಶ್ರೀ ಮೊಯ್ದಿದ್ದೀನ್ ಬಾವ, ಕಾರ್ಪೋರೇಟರ್ ಶ್ರೀಯುತ ಶಶಿಧರ್ ಹೆಗ್ಡೆ ಭಾಗವಹಿಸಿದ್ದರು.



* ದಿನಾಂಕ 05-07-2016 ರಂದು ಶ್ರೀ ನಾರಾಯಣ ಗುರು ಆಂಗ್ಲ ಮಾಧ್ಯಮ ಶಾಲೆಯ ಸ್ಕೌಟ್ ಮತ್ತು ಗೈಡ್ ವಿದ್ಯಾರ್ಥಿಗಳು ಕೃಷ್ಣಾಪುರದ ಕೃಷ್ಣಮಠದ ಹತ್ತಿರದ ಗದ್ದೆಯಲ್ಲಿ ಸ್ಕೌಟ್ ಶಿಕ್ಷಕ ಶ್ರೀ ಭರತ್ ಹಾಗೂ ಗೈಡ್ ಶಿಕ್ಷಕಿ ಕುಮಾರಿ ಶ್ವೇತ ಡಿ. ಇವರ ನೇತೃತ್ವದಲ್ಲಿ ನಾಟಿ ಮಾಡಿ ಖುಷಿ ಪಟ್ಟರು.

* ದಿನಾಂಕ 16-07-2016 ರಿಂದ 17-07-2016 ರ ವರೆಗೆ ಜಿಲ್ಲಾ ತರಬೇತಿ ಕೇಂದ್ರ ಪಿಲಿಕುಳದಲ್ಲಿ ತೃತೀಯ ಸೋಪಾನ ಪರೀಕ್ಷಾ ಶಿಬಿರ ನಡೆಯಿತು. ಶ್ರೀ ಎನ್.ಜಿ. ಮೋಹನ್ ಜಿಲ್ಲಾ ಮುಖ್ಯ ಆಯುಕ್ತರು ಪರೀಕ್ಷಾ ಶಿಬಿರಕ್ಕೆ ಚಾಲನೆ ನೀಡಿದರು. ಶ್ರೀ ರಾಮಶೇಷ ಶೆಟ್ಟಿ ಜಿಲ್ಲಾ ಸ್ಕೌಟ್ ಆಯುಕ್ತರು ಉಪಸ್ಥಿತರಿದ್ದರು. ಶ್ರೀ ಶಾಂತಾರಾಮ್ ಪ್ರಭು ಎ.ಎಲ್.ಟಿ. (ಸ್ಕೌಟ್) ವಿಭಾಗಕ್ಕೆ ಮತ್ತು ಶ್ರೀಮತಿ ಜಯಶ್ರೀ ಎಲ್.ಟಿ. (ಗೈಡ್) ವಿಭಾಗಕ್ಕೆ ನಾಯಕರಾಗಿ ಸಹಕರಿಸಿದರು. ತೃತೀಯ ಸೋಪಾನ ಪರೀಕ್ಷಾ ಶಿಬಿರಕ್ಕೆ ಸಹಾಯಕರಾಗಿ ಶ್ರೀ ಎಮ್.ಜಿ. ಕಜೆ, ಶ್ರೀಮತಿ ಶುಭ ವಿಶ್ವನಾಥ್ ಎ.ಎಲ್.ಟಿ. ಶ್ರೀ ಪ್ರತಿಮ್ ಕುಮಾರ್ ಎಲ್.ಟಿ. ಶ್ರೀ ವಾಮನ್ ದಾಸ್, ಶ್ರೀ ಪ್ರಸಾದ್, ಮಂಜುಳ, ದೀಕ್ಷಿತಾ, ಶರ್ಮಿಳಾ ಸಹಕರಿಸಿದರು. ವಿವಿಧ ಶಾಲೆಗಳಿಂದ ಒಟ್ಟು 101 ಸ್ಕೌಟ್ ಮತ್ತು ಗೈಡ್ ವಿದ್ಯಾರ್ಥಿಗಳು ಶಿಕ್ಷಕರ ಸಮೇತ ಭಾಗವಹಿಸಿದ್ದರು.

* ದಿನಾಂಕ 23-07-2016 ರಿಂದ 24-07-2016 ರ ವರೆಗೆ ಶ್ರೀ ರಾಮಕೃಷ್ಣ ಪ್ರೌಢಶಾಲೆಯ ಸಭಾಂಗಣದಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಮಟ್ಟದ ತೃತೀಯ ಸೋಪಾನ ಪರೀಕ್ಷೆಗಳನ್ನು ನಡೆಸಲಾಯಿತು. ಇದರಲ್ಲಿ 23 ಶಿಕ್ಷಕರು, 120 ಸ್ಕೌಟ್ಸ್, 98 ಗೈಡ್ಸ್‌ಗಳು ಭಾಗವಹಿಸಿದ್ದರು. ದಿನಾಂಕ 23-07-2016 ರಂದು ಕಾರ್ಯಕ್ರಮವನ್ನು ಉದ್ಘಾಟಿಸಲಾಯಿತು. ಸಭಾಕಾರ್ಯಕ್ರಮದಲ್ಲಿ ಅಧ್ಯಕ್ಷರಾಗಿ ಭಾಗವಹಿಸಿದ ಶ್ರೀಮತಿ ವಿದ್ಯಾ ಆರ್ ಗೌರಿಯವರು ಎಲ್ಲರಿಗೂ ಶುಭ ಹಾರೈಸಿದರು.

* ದಿನಾಂಕ 30-07-2016 ರಿಂದ 31-07-2016 ರ ವರೆಗೆ ಜಿಲ್ಲಾ ಸ್ಕೌಟ್ಸ್-ಗೈಡ್ಸ್ ತರಬೇತಿ ಕೇಂದ್ರ, ಪಿಲಿಕುಳ, ಮಂಗಳೂರು ಇಲ್ಲಿ ಜಿಲ್ಲಾ ಮಟ್ಟದ ತೃತೀಯ ಸೋಪಾನ ಪರೀಕ್ಷೆಗಳನ್ನು ನಡೆಸಲಾಯಿತು. ಈ ಪರೀಕ್ಷಾ ಶಿಬಿರದಲ್ಲಿ 30 ಗೈಡ್ ಕ್ಯಾಪ್ಟನ್‌ಗಳು ಮತ್ತು 176 ಗೈಡ್ಸ್‌ಗಳು ಭಾಗವಹಿಸಿದ್ದರು. 31-07-2016 ರಂದು ಸಂಸ್ಥೆಯ ಆಯುಕ್ತರಾದ ಶ್ರೀ ಎನ್.ಜಿ. ಮೋಹನ್ ರವರ ಅಧ್ಯಕ್ಷತೆಯಲ್ಲಿ ಸಮಾರೋಪ ಸಮಾರಂಭ ನಡೆಯಿತು. ಸ್ಕೌಟ್ ವಿಭಾಗದ ಆಯುಕ್ತರಾದ ಶ್ರೀ ರಾಮಶೇಷ ಶೆಟ್ಟಿಯವರು ಮಕ್ಕಳಲ್ಲಿ ಉತ್ತಮ ಶಿಸ್ತು, ಧೈರ್ಯ, ಮಾನವೀಯ ಮೌಲ್ಯಗಳನ್ನು ವೃದ್ಧಿಸಿಕೊಂಡು ಉತ್ತಮ ಕ್ರಿಯಾಶೀಲ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳಬೇಕೆಂದು ಕಿವಿಮಾತನ್ನು ತಿಳಿಸಿದರು. ಹಿರಿಯ ಮುತ್ಸದ್ಧಿ ಶ್ರೀ ವಾಸುದೇವ ಬೋಳೂರು, ಕೋಶಾಧಿಕಾರಿಯವರು ಶಾಲೆಯಲ್ಲಿ ಎಲ್ಲಾ ಮಕ್ಕಳು ಸ್ಕೌಟ್-ಗೈಡ್‌ಗೆ ಸೇರಿ ಇದರ ಪ್ರಯೋಜನವನ್ನು ಪಡೆದುಕೊಂಡು ಇತರರಿಗೂ ಇದರ ಮಹತ್ವನ್ನು ತಿಳಿಸಿಕೊಟ್ಟು ದೇಶದ ಸಂರಕ್ಷಣೆಯಲ್ಲಿ ತಮ್ಮನ್ನು ತಾವು ತೊಡಗಿಸುವಲ್ಲಿ ಸಹಕರಿಸಬೇಕೆಂದು ತಿಳಿಹೇಳಿದರು

* ದಿನಾಂಕ 28-07-2016 ರಂದು ಸ್ಥಳೀಯ ಸಂಸ್ಥೆ ಉಳ್ಳಾಲ ಇದರ ವತಿಯಿಂದ ಸ.ಹಿ.ಪ್ರಾ.ಶಾಲೆ ಮಂಜನಾಡಿ ಇಲ್ಲಿ ಪುನಃಶ್ಚೇತನ ಶಿಬಿರ ನಡೆಯಿತು. ಸ್ಕೌಟರ್-ಗೈಡರ್‌ಗಳಿಗೆ ದಳ-ಕಂಪನಿ ಮೀಟಿಂಗ್ ನಡೆಸುವ ವಿಧಾನ, ವಿವಿಧ ಗಂಟುಗಳು, ಪ್ರಥಮ ಚಿಕಿತ್ಸೆ, ಅಗ್ರಗಾಮಿತ್ವ, ದಿಕ್ಕುಗಳು-ನಕ್ಷೆ ತಯಾರು ಮಾಡುವುದು ಮೊದಲಾದ ವಿಷಯಗಳ ಬಗ್ಗೆ ತರಬೇತಿ ನೀಡಲಾಯಿತು.

* ದಿನಾಂಕ 27-07-2016 ರಂದು ಉಪ್ಪಿನಂಗಡಿ ಸ್ಥಳೀಯ ಸಂಸ್ಥೆಯ ವತಿಯಿಂದ ಪುನಃಶ್ಚೇತನ ಶಿಬಿರವನ್ನು ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀಮತಿ ಚಂದ್ರಕಲಾ ಎಸ್. ಜಿಲ್ಲಾ ಸಂಘಟಕರಾದ ಶ್ರೀ ಭರತ್ ರಾಜ್ ಹಾಗೂ ಸಹಾಯಕ ಜಿಲ್ಲಾ ಆಯುಕ್ತ ಶ್ರೀ ಬಿ. ಐತಪ್ಪ ನಾಯ್ಕ್‌ರವರ ನೇತೃತ್ವದಲ್ಲಿ ನಡೆಸಲಾಯಿತು. ವಿವಿಧ ಕೌನ್ಸಿಲರ್‌ಗಳಾಗಿ ಸವಿತಾ ಬಂಟ್ರ, ಪುರಂದರ ಗೌಡ ಪುಚ್ಚೇರಿ, ಯಶೋಧ ಬೆಳ್ಳಿಪ್ಪಾಡಿ, ಗೀತಾ ಅಯೋಧ್ಯನಗರ ಹಾಗೂ ಜಯಶ್ರೀ ಅಲಂಕಾರು ಇವರನ್ನು ಆಯ್ಕೆ ಮಾಡಲಾಯಿತು. ಸಹಾಯಕ ಜಿಲ್ಲಾ ಆಯುಕ್ತ ಶ್ರೀ ಬಿ. ಐತಪ್ಪ ನಾಯ್ಕ ವಂದಿಸಿದರು.

* ದಿನಾಂಕ 26-07-2016 ರಂದು ಕಾರ್ಗಿಲ್ ವಿಜಯ ದಿವಸವನ್ನು ಎಸ್.ಡಿ.ಎಂ. ಆಂಗ್ಲ ಮಾಧ್ಯಮ ಶಾಲೆಯಲ್ಲಿ ಆಚರಿಸಲಾಯಿತು. ಅತಿಥಿಯಾಗಿ ನಿವೃತ್ತ ಸೈನಿಕ ಶ್ರೀ ನಿಕೋಲಸ್ ಪ್ಲಾಸಿಡ್ ಪಿಂಟೋ ಆಗಮಿಸಿದ್ದರು. ಪೋಲಿಸ್ ಇಲಾಖೆಯಿಂದ ಶ್ರೀಮತಿ ಸವಿತಾ, ಶ್ರೀ ಪ್ರಮೋದಿನಿ ಭೇಟಿ ನೀಡಿದ್ದರು. ಶಾಲಾ ಮುಖ್ಯೋಪಾಧ್ಯಾಯಿನಿ ಶ್ರೀಮತಿ ಹೇಮಲತಾ ಎಮ್.ಆರ್. ಇವರ ನೇತೃತ್ವದಲ್ಲಿ ನಡೆಯಿತು. ಸರ್ವಧರ್ಮ ಪ್ರಾರ್ಥನೆಯೊಂದಿಗೆ ಕಾರ್ಯಕ್ರಮವನ್ನು ಆರಂಭಿಸಲಾಯಿತು. ಅತಿಥಿ ಸ್ಥಾನದಿಂದ ಮಾತನಾಡಿದ ಶ್ರೀ ನಿಕೋಲಸ್ ಪ್ಲಾಸಿಡ್ ಪಿಂಟೋರವರು ಕಾರ್ಗಿಲ್ ದಿನಾಚರಣೆಯ ಮತ್ತು ಸೇನಾ ಚಟುವಟಿಕೆಯ ಬಗ್ಗೆ ಸ್ಕೌಟ್-ಗೈಡ್‌ಗಳಿಗೆ ಮನಮುಟ್ಟುವಂತೆ ತಿಳಿಯಪಡಿಸಿದರು. ಆತ್ಮಸ್ಥೈರ್ಯವು ಬಹಳ ಮುಖ್ಯ. ಆತ್ಮಸ್ಥೈರ್ಯವಿದ್ದರೆ ಯಾವುದನ್ನಾದರೂ ಗೆದ್ದು ಬರಬಹುದು. ಎಂದು ತಿಳಿಸಿದರು. ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಘಟಕರಾದ ಶ್ರೀ ಭರತ್ ರಾಜ್ ಇವರು ಸ್ಕೌಟ್ಸ್-ಗೈಡ್ಸ್‌ನ ಉಪಯೋಗ ಮತ್ತು ಇದರಿಂದ ಯಾವ ರೀತಿಯಲ್ಲಿ ಸಹಾಯಕವಾಗುತ್ತೆ ಎಂಬುದನ್ನು ತಿಳಿಯಪಡಿಸಿದರು. ಕ್ರೀಡಾ, ಸಾಹಿತ್ಯ, ಸಾಂಸ್ಕೃತಿಕ ಸಂಘದವರು ವಿವಿಧ ಸಾಂಸ್ಕೃತಿಕ ಕಾರ್ಯಕ್ರಮವನ್ನು ನಡೆಸಿಕೊಟ್ಟರು.

* ನಗರದ ಕೊಡಿಯಾಲ್‌ಬೈಲಿನ ಶಾರದಾ ವಿದ್ಯಾಲಯದಲ್ಲಿ ಕಾರ್ಗಿಲ್ ದಿನಾಚರಣೆಯನ್ನು ಆಚರಿಸಲಾಯಿತು. ನಿವೃತ್ತ ಸೇನಾ ಯೋಧ ಕ್ಯಾಪ್ಟನ್ ಶ್ರೀ ಬಾಲಕೃಷ್ಣ ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಯಾಗಿದ್ದರು. ಭಾರತ-ಚೀನಾ ಯುದ್ಧ, ಭಾರತ-ಪಾಕ್ ಯುದ್ಧ ಹಾಗು ಕಾರ್ಗಿಲ್ ಕದನಗಳಲ್ಲಿ ಪ್ರತ್ಯಕ್ಷವಾಗಿ ಪಾಲ್ಗೊಂಡಿದ್ದ ಕ್ಯಾಪ್ಟನ್ ಬಾಲಕೃಷ್ಣ ಅವರನ್ನು ಈ ಸಂದರ್ಭ ಶಾರದಾ ವಿದ್ಯಾಸಂಸ್ಥೆಯ ವತಿಯಿಂದ ಸನ್ಮಾನಿಸಲಾಯಿತು.

ಸನ್ಮಾನವನ್ನು ಸ್ವೀಕರಿಸಿ ಮಾತನಾಡಿದ ಕ್ಯಾ. ಬಾಲಕೃಷ್ಣರವರು ವಿದ್ಯಾರ್ಥಿಗಳಿಗೆ ಸೇನೆಗೆ ಸೇರುವ ಮಹತ್ವವನ್ನು ತಿಳಿಸಿ ಸೈನ್ಯಕ್ಕೆ ಸೇರುವಂತೆ ಸಲಹೆ ನೀಡಿದರು. ಶಾರದಾ ವಿದ್ಯಾ ಸಂಸ್ಥೆಗಳ ಅಧ್ಯಕ್ಷರಾದ ಪ್ರೊ. ಎಂ.ಬಿ. ಪುರಾಣಿಕರು ದೇಶದ ರಕ್ಷಣೆಯಲ್ಲಿ ಸೈನಿಕರ ಪಾತ್ರ ಹಾಗೂ ಅನೇಕ ಯುದ್ಧಗಳಲ್ಲಿ ಪಾಲ್ಗೊಂಡ ವೀರ ಯೋಧರ ಸಾಹಸಗಾಥೆಗಳನ್ನು ವಿದ್ಯಾರ್ಥಿಗಳಿಗೆ ವಿವರಿಸಿದರು.

* ದಿನಾಂಕ 30-07-2016 ರಂದು ರಾಜ್ಯ, ರಾಷ್ಟ್ರಪತಿ ಪುರಸ್ಕಾರ ಪಡೆದ ಸ್ಕೌಟ್ಸ್-ಗೈಡ್ಸ್‌ಗಳಿಗೆ ಅಭಿನಂದನಾ ಕಾರ್ಯಕ್ರಮವು ಸೌಜನ್ಯ ಸ್ಕೌಟ್ಸ್ ದಳ ಶ್ರೀ ರಾಮಕೃಷ್ಣ ಪ್ರೌಢಶಾಲೆ, ಹರೇಕಳವತಿಯಿಂದ ನಡೆಯಿತು. ಕಾರ್ಯಕ್ರಮವನ್ನು ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ರಾಜ್ಯಾಧ್ಯಕ್ಷರಾದ ಧರ್ಮದರ್ಶಿ ಶ್ರೀ ಹರಿಕೃಷ್ಣ ಪುನರೂರು ರವರು ಉದ್ಘಾಟಿಸಿದರು. ರಾಜ್ಯ ಪುರಸ್ಕಾರ ಪಡೆದ 7 ಸ್ಕೌಟ್ಸ್, 10 ಗೈಡ್ಸ್, ಹಾಗು ರಾಷ್ಟ್ರಪತಿ ಪುರಸ್ಕಾರ ಪಡೆದ 2 ಗೈಡ್ಸ್‌ಗಳನ್ನು ಅಭಿನಂದಿಸಲಾಯಿತು. ಅಧ್ಯಕ್ಷತೆಯನ್ನು ತ್ರಿಶಕ್ತಿ ವಿದ್ಯಾವರ್ಧಕ ಸಂಘದ ಅಧ್ಯಕ್ಷರಾದ ಶ್ರೀ ಪ್ರಹ್ಲಾದ್ ರೈ ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ ತೋನ್ಸೆ ಪುಷ್ಕಳ ಕುಮಾರ್, ಶ್ರೀ ಭರತ್ ರಾಜ್ ಶೆಟ್ಟಿ, ಸಂಚಾಲಕರಾದ ಶ್ರೀ ಜಯರಾಮ ಆಳ್ವ ಪೋಡಾರು ಉಪಸ್ಥಿತರಿದ್ದರು. ಮುಖ್ಯೋಪಾಧ್ಯಾಯರಾದ ಶ್ರೀ ಕೆ. ರವೀಂದ್ರ ರೈ ಸ್ವಾಗತಿಸಿದರು. ಸ್ಕೌಟ್ಸ್ ಮಾಸ್ಟರ್ ಶ್ರೀ ತ್ಯಾಗಂ ಹರೇಕಳ ಕಾರ್ಯಕ್ರಮ ನಿರೂಪಿಸಿದರು.

* ದಿನಾಂಕ 30-07-2016 ರಂದು ಎಸ್.ಎಮ್. ಕುಶೆ ವಿದ್ಯಾಸಂಸ್ಥೆಯ ರೋವರ್-ರೇಂಜರ್ಸ್ ಅತ್ತಾವರ ಪರಿಸರದಲ್ಲಿ ಪರಿಸರ ನೈರ್ಮಲ್ಯದ ಬಗ್ಗೆ, ಮಲೇರಿಯಾ, ಡೆಂಗ್ಯೂ, ಚಿಕನ್‌ಗುನ್ಯಾ ರೋಗಗಳ ಬಗ್ಗೆ ಜನರಿಗೆ ಮಾಹಿತಿಗಳ ಕರಪತ್ರವನ್ನು ವಿತರಿಸಿ ಭಿತ್ತಿಪತ್ರಗಳನ್ನು ಹಂಚುವ ಮೂಲಕ ಸಮಾಜಸೇವೆಯಲ್ಲಿ ಭಾಗವಹಿಸಿದರು. ಇವರಿಗೆ ದಕ್ಷಿಣ ಕನ್ನಡ ಜಿಲ್ಲಾ ಆರೋಗ್ಯ ಇಲಾಖೆಯವರು ಸಹಕರಿಸಿದರು.

* ದಿನಾಂಕ 30-07-2016 ರಿಂದ 06-08-2016 ರ ವರೆಗೆ ಇಂಗ್ಲೆಂಡ್ ನಲ್ಲಿ ನಡೆದ 8ನೇ ಅಂತರಾಷ್ಟ್ರೀಯ ಜಾಂಬೋರಿ-2016ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ತಾಲ್ಲೂಕಿನ ಇಂದ್ರಪ್ರಸ್ಥ ವಿದ್ಯಾಲಯ, ಉಪ್ಪಿನಂಗಡಿ ಶಾಲೆಯ ಶ್ರೀಮತಿ ಬ್ಲೆಂಡಿನ್ ರೋಡ್ರಿಗಸ್ ಗೈಡರ್, ಸ್ಕೌಟ್ಸ್ ರಿಷಿಕೇಷ್ ರಾಜಾರಾಂ ಸುವರ್ಣ, ರಜತ್ ಕೃಷ್ಣ, ಕ್ಷಿತಿಜ, ಅಮಲ, ಅರ್ಚನ ಮತ್ತು ಮಂಗಳೂರು ತಾಲ್ಲೂಕಿನ ಶಾರದಾ ವಿದ್ಯಾಲಯ ಶಾಲೆಯ ಶ್ರೀ ದಿನೇಶ್, ಭಗತ್ ಪ್ರವೀಣ್ ಉಳ್ಳಾಲ್, ಆರ್ಯನ್ ಸುವರ್ಣ, ಹರ್ಷಿತಾ ತಪಸ್, ಮೇಘನಾ ಹೆಗ್ಡೆ. ಪ್ರೇಕ್ಷಾ ಎಚ್. ಸುಮೇಧ ಸುಧಾಕರ್ ಕಿನಿ, ಶ್ಲೋಕ ಚಂದ್ರ, ನಂದಿತಾ ಶಶಿಧರ್ ಭಟ್, ಮೇಘನಾ, ಲಾವಣ್ಯ, ಕಮಲೇಶ್ ರಾವ್, ಶಶಾಂಕ್ ಕೆ.ಎಸ್. ತುಷಾರ್, ಗಿರೀಶ್, ರಾವ್, ವರ್ಷ ರಾಮಚಂದ್ರ, ಅಮೃತ, ನಂದಿನಿ, ಕಾವ್ಯ ಮಹಾಲಿಂಗೇಶ್ವರ ಭಟ್, ಸಾಕ್ಷಿ ವಿಜಯ್, ಸಾಕ್ಷಿ ಚಂದ್ರ ರಾಜ್, ಆದಿತ್ಯ ಅರುಣ್ ಮಯ್ಯ, ಚಕಿತ್ ಎಮ್ ಶಿವ, ಭೂಮಿ ಭಾಸ್ಕರ್ ರೈ, ಶಶಾಂಕ್, ಸುಭಾಷ್ ಪ್ರವೀಣ್ ಉಳ್ಳಾಲ್, ಭುವನ್ ವೈಷ್ಣವಿ ವರಧರಾಜ್ ಭಟ್ ಇವರುಗಳು ಭಾಗವಹಿಸಿದ್ದರು.

## ದಾವಣಗೆರೆ

ದಿನಾಂಕ 24-07-2016 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆ, ದಕ್ಷಿಣ ವಲಯ, ನೇತಾಜಿ ಸ್ಕೌಟ್ ಗ್ರೂಪ್ ಮತ್ತು ಚೇತನ ಗೈಡ್ ಗ್ರೂಪ್ ವತಿಯಿಂದ ವನಮಹೋತ್ಸವ ಹಾಗೂ ವಾರಾಂತ್ಯ ಶಿಬಿರವನ್ನು ದಾವಣಗೆರೆ ದೃಶ್ಯಕಲಾ ಮಹಾವಿದ್ಯಾಲಯದಲ್ಲಿ ಹಮ್ಮಿಕೊಳ್ಳಲಾಗಿತ್ತು. ಈ ಕಾರ್ಯಕ್ರಮದ ಉದ್ಘಾಟನೆಯನ್ನು ಶಿಬಿರದ ನಾಯಕರಾದ ಶ್ರೀ. ಡಿ. ಬಸವರಾಜ್ ಎಲ್.ಟಿ.(ಎಸ್) ಇವರು ನೆರವೇರಿಸಿದರು. ಶ್ರೀ ಕೆ.ಹೆಚ್.ಪಂಚಾಕ್ಷರಪ್ಪನವರು ಅಧ್ಯಕ್ಷತೆಯನ್ನು ವಹಿಸಿಕೊಂಡಿದ್ದು ಸ್ಕೌಟ್ ಆಯುಕ್ತರಾದ ಶ್ರೀ ಎ.ಪಿ. ಷಡಾಕ್ಷರಪ್ಪ, ದಕ್ಷಿಣ ವಲಯದ ಕಾರ್ಯದರ್ಶಿಗಳಾದ ಶ್ರೀ ಸಿ.ಆರ್. ಮರುಳಪ್ಪ, ಜಿಲ್ಲಾ ಖಜಾಂಚಿಗಳಾದ ಶ್ರೀ ಬಿ.ವಿ. ವಿಶ್ವನಾಥ ಸೇರಿ ಗಿಡ ನೆಡುವುದರ ಮೂಲಕ ವನಮಹೋತ್ಸವ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು. ಸ್ಕೌಟ್-ಗೈಡ್‌ನ ವಿಷಯಗಳಾದ ಪ್ರತಿಜ್ಞೆ, ನಿಯಮ, ಧ್ವಜಗಳು, ಲ್ಯಾಷಿಂಗ್ಸ್, ಕಂಪಾಸ್, ಪ್ರಥಮ ಚಿಕಿತ್ಸೆ, ಮ್ಯಾಪಿಂಗ್ ಅಂಜಾಜಿಸುವಿಕೆ ಹೀಗೆ ಹಲವಾರು ತರಗತಿಗಳನ್ನು ನಡೆಸಲಾಯಿತು.

* ದಿನಾಂಕ 15-08-2016 ರಂದು ದಾವಣಗೆರೆ ಜಿಲ್ಲಾ ಕ್ರೀಡಾಂಗಣದಲ್ಲಿ ನಡೆದ 70ನೇ ಸ್ವಾತಂತ್ರ್ಯೋತ್ಸವದ ಆಚರಣೆಯ ಪಥಸಂಚಲನದಲ್ಲಿ ಸೆಂಟ್‌ಪಾಲ್ಸ್ ಕಾನ್ವೆಂಟ್ ಹಿರಿಯ ಪ್ರಾಥಮಿಕ ಶಾಲೆಯ ಗೈಡ್ಸ್‌ಗಳಿಗೆ ಪ್ರಥಮ ಬಹುಮಾನ ಲಭಿಸಿತು. ಶ್ರೀ ಮಂಜುನಾಥ್ ಬಳ್ಳಾರಿ, ತಹಶೀಲ್ದಾರ್, ದಾವಣಗೆರೆ ಇವರು ಬಹುಮಾನ ವಿತರಿಸಿದರು. ಈ ಸಂದರ್ಭದಲ್ಲಿ ಶ್ರೀಮತಿ ಹೆಚ್.ಎಂ. ಪ್ರೇಮ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಶ್ರೀ ಬಿ. ಸಿದ್ಧಪ್ಪ ಕ್ಷೇತ್ರ ಶಿಕ್ಷಣಾಧಿಕಾರಿಗಳು, ದಾವಣಗೆರೆ ಉತ್ತರ ವಲಯ, ಬಾಪೂಜಿ ಓಪನ್ ಸ್ಕೌಟ್ ಟ್ರೂಪ್‌ನ ಸ್ಕೌಟ್ ಮಾಸ್ಟರ್ ಶ್ರೀ ರವೀಂದ್ರಸ್ವಾಮಿ, ಟಿ.ಎಂ. ಉಪಸ್ಥಿತರಿದ್ದರು.



* ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ವತಿಯಿಂದ ದಿನಾಂಕ 15-08-2016 ರಂದು 70ನೇ ಸ್ವಾತಂತ್ರ್ಯ ದಿನಾಚರಣೆ ಅಂಗವಾಗಿ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ದಾವಣಗೆರೆ ಜಿಲ್ಲೆಯ ಹುತಾತ್ಮರಾದ ಹಳ್ಳೂರು ನಾಗಪ್ಪ, ಅಕ್ಕಸಾಲೆ ವಿರೂಪಾಕ್ಷಪ್ಪ, ಬಿದರ ಕುಂದಿ ನಿಂಗಪ್ಪ, ಹದಡಿ ನಿಂಗಪ್ಪ, ಹಮಾಲಿ ತಿಮ್ಮಣ್ಣ, ಮಾಗಾನಹಳ್ಳಿ ಹನುಮಂತಪ್ಪ ಇವರುಗಳಿಗೆ ನಮನ ಸಲ್ಲಿಸಲಾಯಿತು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಮುರುಘರಾಜೇಂದ್ರ ಜೆ. ಚಿಗಟೇರಿ ಇವರು ಮಾರ್ಗದರ್ಶನ ಮಾಡಿದರು. ಶ್ರೀ ಎ.ಪಿ. ಷಡಾಕ್ಷರಪ್ಪ ಜಿಲ್ಲಾ ಸ್ಕೌಟ್ ಆಯುಕ್ತರು, ಶ್ರೀಮತಿ ಪುಟ್ಟಮ್ಮ ಮಹಾರುದ್ರಯ್ಯ ಜಿಲ್ಲಾ ಗೈಡ್ ಆಯುಕ್ತರು, ಶ್ರೀ ಕೆ.ಜಿ. ಶರಣಪ್ಪ, ಜಿಲ್ಲಾ ಸಹಾಯಕ ಆಯುಕ್ತರು, ಶ್ರೀ ಬೂಸ್ನೂರು ವಿಶ್ವನಾಥ್, ಜಿಲ್ಲಾ ಖಜಾಂಚಿಗಳು, ಶ್ರೀ ಎಂ.ಪಿ. ಚಂದ್ರಪ್ಪ ಸಹಾಯಕ ಆಯುಕ್ತರು ದಾವಣಗೆರೆ ದಕ್ಷಿಣ ವಲಯ, ಶ್ರೀ ಹಾಲಪ್ಪ ಜಿಲ್ಲಾ ಸಹಾಯಕ ಆಯುಕ್ತರು, ಶ್ರೀ ಎನ್.ಡಿ. ತಮ್ಮಣ್ಣನವರ್ ಜಿಲ್ಲಾ ತರಬೇತಿ ಆಯುಕ್ತರು, ಶ್ರೀ ಎಸ್. ಶಂಕರ್ ನಾಯ್ಕ್ ಜಿಲ್ಲಾ ಕಾರ್ಯದರ್ಶಿಗಳು, ಶ್ರೀ ನೂರುಲ್ಲಾ ರಾಜ್ಯ ಸಹಾಯಕ ಸಂಘಟನಾ ಆಯುಕ್ತರು, ಶ್ರೀ ಟಿ.ಎಸ್. ಶಿವಣ್ಣ ಜಿಲ್ಲಾ ಸಂಘಟಕರು, ಕುಮಾರಿ ಪ್ರಿಯಾಂಕ ಹೆಚ್.ಎಂ. ಜಿಲ್ಲಾ ಸಂಘಟಕರು, ಶ್ರೀಮತಿ ಆರ್. ಸುಖವಾಣಿ ಜಿಲ್ಲಾ ಜಂಟಿ ಕಾರ್ಯದರ್ಶಿಗಳು ಉಪಸ್ಥಿತರಿದ್ದರು.

ಅನ್‌ಮೋಲ್ ಪಬ್ಲಿಕ್ ಸ್ಕೂಲ್, ಜೈನ್ ವಿದ್ಯಾಲಯ ಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳು ಸರ್ಕಾರಿ ಪ್ರಥಮ ದರ್ಜೆಯ ಕಾಲೇಜು ದಾವಣಗೆರೆಯ ರೋವರ್ಸ್ ರೇಂಜರ್ಸ್‌ಗಳು ಸರ್ಕಾರಿ ಮಹಿಳಾ ಪ್ರಥಮ ದರ್ಜೆ ಕಾಲೇಜಿನ ರೇಂಜರ್ಸ್‌ಗಳು ಸುಮಾರು 100 ಮಕ್ಕಳು ಹಾಗು ಸ್ಕೌಟರ್ಸ್-ಗೈಡರ್ಸ್‌ಗಳು ಭಾಗವಹಿಸಿದ್ದರು.

## ಧಾರವಾಡ




ದಿನಾಂಕ 20-07-2016 ರಿಂದ 24-07-2016 ರ ವರೆಗೆ ಗೈಡ್ಸ್ ಗಳಿಗಾಗಿ ಏರ್ಪಡಿಸಿದ ತೃತೀಯ ಸೋಪಾನ ತರಬೇತಿ ಶಿಬಿರವನ್ನು ಜಿಲ್ಲಾ ತರಬೇತಿ ಕೇಂದ್ರ ದಡ್ಡಿಕಮಲಾಪೂರದಲ್ಲಿ ಹಮ್ಮಿಕೊಳ್ಳಲಾಯಿತು. ಜಿಲ್ಲೆಯ ಎಲ್ಲ ತಾಲ್ಲೂಕಗಳಿಂದ 234 ಗೈಡ್ಸ್ ಮಕ್ಕಳು ಭಾಗವಹಿಸಿ ಶಿಬಿರದ ಲಾಭ ಪಡೆದರು. ಹೊಸ ಎ.ಪಿ.ಆರ್.ಓ ದಂತೆ ಮಕ್ಕಳಿಗೆ ತರಬೇತಿ ನೀಡಲಾಯಿತು.

ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಂ.ಎಂ. ಲೋಂಡೆ ಅವರು ಶಿಬಿರದ ಮುಕ್ತಾಯ ಸಮಾರಂಭದಲ್ಲಿ ಭಾಗವಹಿಸಿ ಸ್ಕೌಟ್-ಗೈಡ್‌ಗಳಿಗೆ ಮಾರ್ಗದರ್ಶನ ಮಾಡಿದರು. ತರಬೇತಿ ಶಿಬಿರದಲ್ಲಿ ಗೈಡ್ಸ್ ಕ್ಯಾಪ್ಟನ್ ಶ್ರೀಮತಿ ಗಿರಿಜಾ ಕುರವತ್ತಿ ಹಾಗೂ ಶ್ರೀಮತಿ ಎ.ವ್ಹಿ. ಫ್ರಾನ್ಸಿಸ್ ಇವರು ನಾಯಕತ್ವವನ್ನು ವಹಿಸಿ ತರಬೇತಿ ಶಿಬಿರವನ್ನು ಯಶಸ್ವಿಗೊಳಿಸಿದರು.

* ದಿನಾಂಕ 25-07-2016 ರಿಂದ 29-07-2016 ರ ವರೆಗೆ ಸ್ಕೌಟ್‌ಗಳಿಗಾಗಿ ಏರ್ಪಡಿಸಿದ ತೃತೀಯ ಸೋಪಾನ ತರಬೇತಿ ಶಿಬಿರವನ್ನು ಜಿಲ್ಲಾ ತರಬೇತಿ ಕೇಂದ್ರ ದಡ್ಡಿಕಮಲಾಪೂರದಲ್ಲಿ ಹಮ್ಮಿಕೊಳ್ಳಲಾಯಿತು. ಜಿಲ್ಲೆಯ ಎಲ್ಲ ತಾಲುಕಗಳಿಂದ 311 ಸ್ಕೌಟ್ಸ್ ಮಕ್ಕಳು ಭಾಗವಹಿಸಿ ಶಿಬಿರದ ಲಾಭ ಪಡೆದರು. ಹೊಸ ಎ.ಪಿ.ಆರ್.ಓ. ದಂತೆ ಮಕ್ಕಳಿಗೆ ತರಬೇತಿ ನೀಡಲಾಯಿತು. ಪಯೋನಿಯರಿಂಗ್, ಎಸ್ಟಿಮೇಶನ್, ನಕ್ಷೆ ತಯಾರುಮಾಡುವುದು ಇನ್ನಿತರ ವಿಷಯದ ಬಗೆಗೆ ತರಬೇತಿ ನಿಡಲಾಯಿತು.

ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಂ.ಎಂ. ಲೋಂಡೆ, ಜಿಲ್ಲಾ ಸ್ಕೌಟ್ಸ್ ಆಯುಕ್ತರಾದ ಶ್ರೀ ವ್ಹಿ.ವ್ಹಿ. ಕಟ್ಟಿ, ಜಿಲ್ಲಾ ತರಬೇತಿ ಸ್ಕೌಟ್ಸ್ ಆಯುಕ್ತಾದ ಶ್ರೀ ಬಿ.ಕೆ. ಪಾಟೀಲ ಇವರು ಶಿಬಿರದ ಮುಕ್ತಾಯ ಸಮಾರಂಭದಲ್ಲಿ ಭಾಗವಹಿಸಿ ಮಕ್ಕಳಿಗೆ ಮಾರ್ಗದರ್ಶನ ಮಾಡಿದರು. ತರಬೇತಿ ಶಿಬಿರದಲ್ಲಿ ಸ್ಕೌಟ್ ಮಾಸ್ಟರ್‌ರಾದ ಶ್ರೀ ಎಸ್.ಎಸ್. ಪಾಟೀಲ ಇವರು ನಾಯಕತ್ವವನ್ನು ವಹಿಸಿ ತರಬೇತಿ ಶಿಬಿರವನ್ನು ಯಶಸ್ವಿಗೊಳಿಸಿದರು.

* ದಿನಾಂಕ 22-07-2016 ರಂದು ಹುಬ್ಬಳ್ಳಿ ತಾಲೂಕ ಸಂಸ್ಥೆ ವತಿಯಿಂದ ಸಿ.ಆರ್.ಪಿ. ಬಿ.ಆರ್.ಪಿ, ಹಾಗೂ ತಾಲೂಕಿನ ಶಾಲೆಗಳ ಮುಖ್ಯೋಪಾದ್ಯಾಯರಿಗೆ ಒಂದು ದಿನದ ಸಾಮಾನ್ಯ ಮಾಹಿತಿ ಶಿಬಿರವು ಸರಕಾರಿ ಮಾದರಿ ಪ್ರಾಥಮಿಕ ಶಾಲೆ ಉಣಕಲ್‌ನಲ್ಲಿ ನಡೆಯಿತು. ಇದರಲ್ಲಿ 126 ಸಿ.ಆರ್.ಪಿ. ಬಿ.ಆರ್.ಪಿ. ಹಾಗೂ ಮುಖ್ಯೋಪಾದ್ಯಾಯರು ಭಾಗವಹಿಸಿದ್ದರು.

ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಂ.ಎಂ. ಲೋಂಡೆ, ಜಿಲ್ಲಾ ಕಾರ್ಯದರ್ಶಿಯಾದ ಶ್ರೀಮತಿ ಪ್ರಭಾ ಲೋಂಡೆ, ಜಿಲ್ಲಾ ತರಬೇತಿ ಸ್ಕೌಟ್ಸ್ ಆಯುಕ್ತರಾದ ಶ್ರೀ ಬಿ.ಕೆ. ಪಾಟೀಲ, ಜಿಲ್ಲಾ ಕೋಶಾಧಿಕಾರಿಯಾದ ಶ್ರೀ ಎಸ್.ಐ. ನೇಕಾರ, ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಎಂ.ಎಲ್. ಹಂಚಾಟೆ, ತಹಶೀಲ್ದಾರರಾದ ಶ್ರೀ ಶಶಿಧರ ಮಾಡ್ಯಾಳ, ಹುಬ್ಬಳ್ಳಿ ತಾಲ್ಲೂಕ ಉಪಾಧ್ಯಕ್ಷರಾದ ಶ್ರೀ ಪವನ ಮಿಸ್ಕಿನ ತಾಲೂಕ ಕಾರ್ಯದರ್ಶಿಯಾದ ಶ್ರೀ ಎನ್. ಎಸ್. ಬಾದಾಮಿ ಸಹ ಕಾರ್ಯದರ್ಶಿಯಾದ ಶ್ರೀಮತಿ ವೀಣಾ ಅಠವಳೆ ಭಾಗವಹಿಸಿದ್ದರು.

## ಗದಗ

ದಿನಾಂಕ 15-07-2016 ರಂದು ಗದಗ ಶಹರ ತಾಲ್ಲುಕ ಸಂಸ್ಥೆ ಸ್ಕೌಟರ್ಸ್-ಗೈಡರ್ಸ್ ಸಮಾವೇಶ, ದಿನಾಂಕ 16-07-2016 ರಂದು ಮುಂಡರಗಿ ತಾಲ್ಲೂಕು ಸಂಸ್ಥೆ ಸ್ಕೌಟರ್ಸ್-ಗೈಡರ್ಸ್ ಸಮಾವೇಶ ಮತ್ತು ದಿನಾಂಕ 18-07-2016 ರಂದು ಶಿರಹಟ್ಟಿ ತಾಲ್ಲೂಕ ಸಂಸ್ಥೆ ಸ್ಕೌಟರ್ಸ್-ಗೈಡರ್ಸ್ ಸಮಾವೇಶವನ್ನು ನಡೆಸಲಾಯಿತು.

* ದಿನಾಂಕ 23-07-2016 ರಂದು ಆದರ್ಶ ಶಿಕ್ಷಣ ಸಮಿತಿ ಕಾಲೇಜಿನಲ್ಲಿ ರೇಂಜರ್ಸ್ ಘಟಕವನ್ನು ಉದ್ಘಾಟಿಸಲಾಯಿತು. ಕಾರ್ಯಕ್ರಮಕ್ಕೆ ಮುಖ್ಯ ಅತಿಥಿಗಳಾಗಿ ಶ್ರೀ ಮುಕುಂದ ಪೊತ್ನೀಸ ಜಿಲ್ಲಾ ಆಯುಕ್ತರು (ಸ್ಕೌ) ಹಾಗು ಶ್ರೀ ಕೆ.ವಿ. ಕುಷ್ಟಗಿ ಆಗಮಿಸಿದ್ದರು.

ಶ್ರೀ ಮುಕುಂದ ಪೊತ್ನೀಸ ಜಿಲ್ಲಾ ಆಯುಕ್ತರು (ಸ್ಕೌ) ಮಾತನಾಡುತ್ತ ರೇಂಜರ್ಸ್ ಮತ್ತು ರೋವರ್ಸ್‌ನ ವಿಸ್ತಾರವಾದ ಮಾಹಿತಿಯನ್ನು ನೀಡುವುದರೊಂದಿಗೆ ಇದರಲ್ಲಿ ಸೇರುವುದರಿಂದ ಆಗುವ ಅನುಕೂಲಗಳು ಮತ್ತು ಉಪಯೋಗಗಳ ಬಗ್ಗೆ ತಿಳಿಸಿಕೊಟ್ಟರು. ಶ್ರೀ ಬಿ.ವಿ. ಕುಷ್ಟಗಿ ಮಾತನಾಡುತ್ತಾ ಇದರಲ್ಲಿ ಭಾಗವಹಿಸಿ ತಮ್ಮ ವೈಯಕ್ತಿಕ ಅಭಿವೃದ್ಧಿ ಮಾಡಿಕೊಳ್ಳಲು ತಿಳಿಸಿದರು. ಕಾರ್ಯಕ್ರಮದಲ್ಲಿ ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಆರ್. ಆರ್. ಕುಲಕರ್ಣಿ ಸ್ವಾಗತಿಸಿದರು. ಶ್ರೀಮತಿ ಮೀನಾಕ್ಷಿರವರು ರೇಂಜರ್ಸ್ ಇತಿಹಾಸ ತಿಳಿಸಿದರು. ನಿರೂಪಣೆಯನ್ನು ಶ್ರೀ ಎಂ.ಬಿ. ಹಾವನೂರು ಮಾಡಿದರು. ಶ್ರೀ ಬಸವರಾಜ ಟಿ.ಪಿ. ವಂದನಾರ್ಪಣೆ ಮಾಡಿದರು.

* ದಿನಾಂಕ 27-07-2016 ರಂದು ಸ್ವಚ್ಛ ಭಾರತ ಶಿಬಿರವನ್ನು ಜಿಲ್ಲಾ ಸಂಸ್ಥೆಯ ವತಿಯಿಂದ ಹಮ್ಮಿಕೊಳ್ಳಲಾಗಿತ್ತು. ಇದರ ಅಂಗವಾಗಿ ಸರಕಾರಿ ಹೆಚ್.ಪಿಎಸ್. ಶಾಲೆನ ನಂ 2, ಗದಗ ಗೈಡ್ಸ್‌ಗಳು ಬಿಇಓ., ಬಿ.ಆರ್.ಸಿ., ಮತ್ತು ಜಿಲ್ಲಾ ಸಂಸ್ಥೆಯ ಆವರಣವನ್ನು ಸ್ವಚ್ಛಗೊಳಿಸಿದರು. ಮುಖ್ಯ ಅತಿಥಿಗಳಾಗಿ ಶ್ರೀ ಕುಂಟೋಜಿರಾವ, ಜಿಲ್ಲಾ ದೈಹಿಕ ಶಿಕ್ಷಣಾಧಿಕಾರಿಗಳು ಉಪನಿರ್ದೇಶಕರ ಕಾರ್ಯಾಲಯ ಗದಗ ಮತ್ತು ಶ್ರೀ ಕಿಲಬನ್ನವರ ಗದಗ ಶಹರ ಸಂಸ್ಥೆ ಉಪಾಧ್ಯಕ್ಷರು ಆಗಮಿಸಿದ್ದರು.

* ದಿನಾಂಕ 03-08-2016 ರಂದು ರೋಣ ತಾಲ್ಲೂಕ ವಿಭಾಗದ ರೋಣ ಪೂರ್ವ ಸ್ಥಳೀಯ ಸಂಸ್ಥೆ ಹಾಗೂ ಪಶ್ಚಿಮ ವಲಯ ಗಜೇಂದ್ರಗಡ ಸ್ಥಳೀಯ ಸಂಸ್ಥೆಗಳ ಸ್ಕೌಟರ್ಸ್-ಗೈಡರ್ಸ್ ಸಮಾವೇಶವನ್ನು ಸರಕಾರಿ ಮಾದರಿ ಹೆಣ್ಣು ಮಕ್ಕಳ ಹೆಚ್.ಪಿ.ಎಸ್. ಶಾಲೆಯಲ್ಲಿ ನಡೆಸಲಾಯಿತು. ಶ್ರೀಡಿ.ಐ. ಆನಂದಿ, ಮಾನ್ಯ ಕ್ಷೇತ್ರ ಶಿಕ್ಷಣಾಧಿಕಾರಿಗಳು ಅಧ್ಯಕ್ಷತೆ ವಹಿಸಿ ಮಾತನಾಡುತ್ತಾ ಪ್ರತಿಯೊಂದು ಶಾಲೆಗಳಲ್ಲಿ ಕಡ್ಡಾಯವಾಗಿ ಸ್ಕೌಟ್ಸ್-ಗೈಡ್ಸ್ ತರಗತಿಗಳನ್ನು ನಡೆಸಲು ತಿಳಿಸಿದರು. ಶ್ರೀ

ಪಾಟೀಲ, ತಾಲ್ಲೂಕ ದೈಹಿಕ ಶಿಕ್ಷಣಾಧಿಕಾರಿಗಳು ಮಾತನಾಡುತ್ತ. ಇದು ಒಳ್ಳೆಯ ಸಂಸ್ಥೆ, ನಾವೆಲ್ಲಾ ಬೆಳೆಸಬೇಕು ಎಂದು ಹೇಳಿದರು. ಈ ಕಾರ್ಯಕ್ರಮದಲ್ಲಿ ರೋಣ ಕಾರ್ಯದರ್ಶಿ ಶ್ರೀಮತಿ ಹಿರೇಮಠ, ಗಜೇಂದ್ರಗಡ ಕಾರ್ಯದರ್ಶಿ ಶ್ರೀ ಕರಿಣಿ, ಸ್ಕೌಟ್ ಮಾಸ್ಟರ್‌ಗಳು, ಗೈಡ್ ಕ್ಯಾಪ್ಟನ್‌ಗಳು, ಕಬ್ ಮಾಸ್ಟರ್‌ಗಳು ಹಾಗೂ ಫ್ಲಾಕ್ ಲೀಡರ್‌ಗಳು ಭಾಗವಹಿಸಿದ್ದರು.

* ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ಸ.ಪ.ಪೂ. ಮಹಾವಿದ್ಯಾಲಯದಲ್ಲಿ ಶೈಕ್ಷಣಿಕ ವರ್ಷದ ಪಿ.ಯು.ಸಿ. ವಿದ್ಯಾರ್ಥಿಗಳಿಗೆ ಸಂಗೊಳ್ಳಿರಾಯಣ್ಣ ರೋವರ್ ಕ್ರ್ಯೂ ಅಡಿಯಲ್ಲಿ ರೋವರ್ ಸ್ಕೌಟ್ ನಾಯಕರಾದ ಶ್ರೀ ಎಸ್.ಎಚ್. ಮಲ್ಲಾಪೂರ ಅವರು ದೀಕ್ಷೆಯನ್ನು ನೀಡಿದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಪ್ರಾಚಾರ್ಯರಾದ ಶ್ರೀ ಆರ್.ಎನ್. ಗೌಡರ ಅವರು ವಹಿಸಿ ದೀಕ್ಷೆಯನ್ನು ತೆಗೆದುಕೊಂಡ ಮಕ್ಕಳು ವಿಶ್ವಸಂಸ್ಥೆಯ ಸದಸ್ಯತ್ವನ್ನು ಪಡೆದುಕೊಂಡ ಕಾರಣ ಉನ್ನತ ಮೌಲ್ಯಗಳಾದ ಸೇವೆ, ಸಹಕಾರ ತ್ಯಾಗಗಳನ್ನು ಸ್ಕೌಟ್ ಸಂಸ್ಥಾಪಕರಾದ ಬೇಡನ್ ಪೋವೆಲ್ ರವರ ಸದ್ಗುಣಗಳನ್ನು ಅಳವಡಿಸಿಕೊಂಡು ಮಾದರಿ ವ್ಯಕ್ತಿಗಳಾಗಬೇಕೆಂದು ಕಿವಿಮಾತು ಹೇಳಿದರು. ಮುಖ್ಯ ಅತಿಥಿಗಳಾಗಿ ಭಾರತ್ ಸ್ಕೌಟ್ಸ್-ಗೈಡ್ಸ್ ಕರ್ನಾಟಕ ಜಿಲ್ಲಾ ಸಂಸ್ಥೆ ಗದಗ ಇದರ ಸಹಾಯಕ ರಾಜ್ಯ ಸಂಘಟಕರಾದ ಶ್ರೀ ಶಿವಕುಮಾರ ಭಾಗವಹಿಸಿದ್ದರು.

## ಹಾವೇರಿ

* ದಿನಾಂಕ 15-08-2016 ರಂದು 70ನೇ ಸ್ವಾತಂತ್ರ್ಯೋತ್ಸವ ದಿನಾಚರಣೆಯ ಅಂಗವಾಗಿ ಜಿಲ್ಲಾ ಕ್ರೀಡಾಂಗಣದಲ್ಲಿ ನಡೆದ ಪಥಚಲನೆಯಲ್ಲಿ ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿ, ಜೆ.ಪಿ. ರೋಟರಿ ಪ್ರೌಢಶಾಲೆಯ ಸ್ಕೌಟ್ಸ್ ತಂಡ ಪ್ರಥಮ ಸ್ಥಾನ ಗಳಿಸಿತು. ಕೆ.ಎಲ್.ಇ., ಪ್ರೌಢಶಾಲೆ ಗೈಡ್ಸ್ ತಂಡ ದ್ವಿತೀಯ ಸ್ಥಾನ ಪಡೆಯಿತು. ಪ್ರಥಮ ಮತ್ತು ದ್ವಿತೀಯ ಸ್ಥಾನ ಪಡೆದ ತಂಡಗಳಿಗೆ - ಶ್ರೀ ರುದ್ರಪ್ಪ ಲಮಾಣಿ, ಮುಜರಾಯಿ ಹಾಗು ಜವಳಿ ಖಾತೆ ರಾಜ್ಯ ಸಚಿವರು ಮತ್ತು ಹಾವೇರಿ ಜಿಲ್ಲಾ ಉಸ್ತುವಾರಿ ಸಚಿವರು ಪ್ರಶಸ್ತಿ ಪತ್ರ ನೀಡಿ ಗೌರವಿಸಿದರು. ಕಾರ್ಯಕ್ರಮದಲ್ಲಿ ಶ್ರೀ ಕೊಟ್ರೇಶಪ್ಪ ಬಸೆಗಣ್ಣಿ, ಅಧ್ಯಕ್ಷರು ಜಿಲ್ಲಾ ಪಂಚಾಯತ ಹಾವೇರಿ, ಶ್ರೀ ಶಿವಕುಮಾರ ಉದಾಸಿ, ಎಂ.ಪಿ. ಹಾವೇರಿ ಶ್ರೀ ಸಂಜೀವ ನೀರಲಗಿ ಅಧ್ಯಕ್ಷರು, ನಗರಾಭಿವೃದ್ಧಿ ಪ್ರಾಧಿಕಾರ ಹಾಗೂ ಡಾ. ವೆಂಕಟೇಶ ಎಂ.ವಿ. ಜಿಲ್ಲಾಧಿಕಾರಿಗಳು, ಶ್ರೀ ಬಿ. ರಮೇಶ್ ಜಿಲ್ಲಾ ಪೋಲಿಸ್ ವರಿಷ್ಠಾಧಿಕಾರಿಗಳು ಹಾವೇರಿ ರವರು ಉಪಸ್ಥಿತರಿದ್ದರು.

## ಹಾಸನ

ದಿನಾಂಕ : 16-07-2016 ರಿಂದ 18-07-2016 ರ ವರೆಗೆ ಜಿಲ್ಲಾ ಸಂಸ್ಥೆ, ಹಾಸನದ ವತಿಯಿಂದ ಜಿಲ್ಲಾ ಸ್ಕೌಟ್ಸ್-ಗೈಡ್ಸ್ ಭವನದಲ್ಲಿ ತೃತೀಯ ಸೋಪಾನದ ಶಿಬಿರವನ್ನು ಏರ್ಪಡಿಸಲಾಗಿತ್ತು.

ದಿನಾಂಕ : 16-07-2016 ರಂದು ಹಾಸನದ ಲಯನ್ಸ್ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಅನಂತರಾಜು, ಕಾರ್ಯದರ್ಶಿ ಶ್ರೀ ಪ್ರಕಾಶ್, ಎಸ್.ಪಿ. ಮತ್ತು ಲಯನೆಸ್ ಕ್ಲಬ್‌ನ ಅಧ್ಯಕ್ಷರೂ ಹಾಗೂ ಜಿಲ್ಲಾ ಗೈಡ್ ಕಮೀಷನರ್ ಶ್ರೀ ಜಯಾ ರಮೇಶ್, ಕಾರ್ಯದರ್ಶಿ ಶ್ರೀಮತಿ ಭಾಗ್ಯ ಯಾಜೀಯವರ ಉಪಸ್ಥಿತಿಯಲ್ಲಿ ಜಿಲ್ಲಾ ಸ್ಕೌಟ್ ಕಮೀಷನರ್ ಶ್ರೀ ಪ್ರಕಾಶ್ ಯಾಜೀ ಯವರು ತೃತೀಯ ಸೋಪಾನ ಪರೀಕ್ಷಾ ಶಿಬಿರವನ್ನು ಉದ್ಘಾಟಿಸಿ ಚಟುವಟಿಕೆಗಳಿಗೆ ಚಾಲನೆ ನೀಡಿದರು.

ದಿನಾಂಕ : 18-07-2016 ರಂದು ಸರ್ವಧರ್ಮ ಪ್ರಾರ್ಥನೆಯನ್ನು ಹಮ್ಮಿಕೊಳ್ಳಲಾಗಿತ್ತು. ಲಯನ್ಸ್ ಮತ್ತು ಲಯನೆಸ್ ಕ್ಲಬ್‌ಗಳ ವತಿಯಿಂದ ಸ್ಕೌಟ್ಸ್-ಗೈಡ್ಸ್‌ಗೆ ಚಿತ್ರಕಲಾ ಸ್ಪರ್ಧೆಯನ್ನೂ ಸಹ ಏರ್ಪಡಿಸಲಾಗಿತ್ತು. ಸಮಾರೋಪ ಸಮಾರಂಭದಲ್ಲಿ ಹಾಸನ ಜಿಲ್ಲಾ ಎಸ್.ಪಿ.ಯವರಾದ ಶ್ರೀ ರಾಹುಲ್ ಕುಮಾರ್ ಶಹಪುರವಾಡ್, ಸರ್ಕಲ್ ಇನ್ಸ್‌ಪೆಕ್ಟರ್, ಶ್ರೀಶಿವಕುಮಾರ್, ಹಾಸನದ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀಮತಿ ಭಾನುಮತಿ, ಜಿಲ್ಲಾ ಮುಖ್ಯ ಆಯುಕ್ತರಾದ ಡಾ. ವಿ.ಎಸ್. ವೀರಭದ್ರಪ್ಪ ಹಾಗು ಇತರ ಜಿಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು. ಒಟ್ಟು 316 ಸ್ಕೌಟ್-ಗೈಡ್‌ಗಳು ಭಾಗವಹಿಸಿದ್ದ ಈ ತರಬೇತಿ ಶಿಬಿರದ ಸ್ಕೌಟ್-ಗೈಡ್‌ಗಳು ಭಾಗವಹಿಸದ್ದ ಈ ತರಬೇತಿ ಶಿಬಿರದ ಸ್ಕೌಟ್-ಗೈಡ್ ವಿಭಾಗಕ್ಕೆ ಶ್ರೀಮತಿ ವೈ.ಡಿ. ಪದ್ಮ ಎ.ಎಲ್.ಟಿ., ನಾಯಕರುಗಳಾಗಿ ಭಾಗವಹಿಸಿದ್ದರು.

* ದಿನಾಂಕ 15-08-2016 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆಯಲ್ಲಿ 70ನೇ ಸ್ವಾತಂತ್ರ್ಯೋತ್ಸವ ದಿನವನ್ನು ಆಚರಿಸಲಾಯಿತು. ಜಿಲ್ಲಾ ಗೈಡ್ ಕಮೀಷನರ್ ಹಾಗು ಲಯನೆಸ್ ಕ್ಲಬ್‌ನ ಅಧ್ಯಕ್ಷರು ಆದ ಶ್ರೀಮತಿ ಜಯರಮೇಶ್ ಧ್ವಜಾರೋಹಣ ನೆರವೇರಿಸಿ, ಹಿತವಚನಗಳನ್ನು ತಿಳಿಹೇಳಿದರು. ರಾಷ್ಟ್ರಪತಿ ಪುರಸ್ಕಾರ್ ಸ್ಕೌಟ್‌ಗಳಿಗೆ ಅಭಿನಂದಿಸಿ ಕೊಡುಗೆಗಳನ್ನು ನೀಡಿದರು. ಈ ಸಂದರ್ಭದಲ್ಲಿ ಜಂಟಿ ಕಾರ್ಯದರ್ಶಿ ಶ್ರೀಮತಿ ಕಾಂಚನಮಾಲ, ಜಿಲ್ಲಾ ಸಂಘಟಕರುಗಳಾದ ಶ್ರೀ ಜೆ.ಎಲ್. ಲೀಲಾಮಹೇಸ್ವರ ಮತ್ತು ಶ್ರೀಮತಿ ಲೀಲಾವತಿ ಉಪಸ್ಥಿತರಿದ್ದು, ಸ್ಕೌಟ್ಸ್, ರೋವರ್ಸ್, ರೇಂಜರ್ಸ್ ಭಾಗವಹಿಸಿದ್ದರು.



* ಹಾಸನದ ಜಿಲ್ಲಾ ಕ್ರೀಡಾಂಗಣದಲ್ಲಿ ನಡೆದ ಸ್ವಾತಂತ್ರ್ಯೋತ್ಸವ ದಿನಾಚರಣೆಯ ಕಾರ್ಯಕ್ರಮದಲ್ಲಿ ಸ್ಕೌಟ್ಸ್-ಗೈಡ್ಸ್ ಭಾಗವಹಿಸಿದ್ದರು. ರಾಷ್ಟ್ರಪತಿ ಪುರಸ್ಕಾರ್ ಪಡೆದ ಸ್ಕೌಟ್-ಗೈಡ್‌ಗಳನ್ನು ಈ ಸಂದರ್ಭದಲ್ಲಿ ಜಿಲ್ಲಾಡಳಿತ ವತಿಯಿಂದ ಹಾಸನ ಜಿಲ್ಲಾ ಉಸ್ತುವಾರಿ ಮಂತ್ರಿಗಳಾದ ಶ್ರೀ ಎ. ಮಂಜು, ಜಿಲ್ಲಾಧಿಕಾರಿಗಳಾದ ಶ್ರೀಮತಿ ಚೈತ್ರ, ಶಾಸಕ ಶ್ರೀ ಹೆಚ್.ಎಸ್. ಪ್ರಕಾಶ್‌ರ ಸಮ್ಮುಖದಲ್ಲಿ ಸನ್ಮಾನಿಸಲಾಯಿತು.

ಅರಸೀಕೆರೆಯ ಜೇನುಕಲ್ ಕ್ರೀಡಾಂಗಣದಲ್ಲಿ ನಡೆದ ಸ್ವಾತಂತ್ರ್ಯೋತ್ಸವದ ಪಥ ಸಂಚಲನದಲ್ಲಿ ಸ್ಕೌಟ್-ಗೈಡ್‌ಗಳು ಭಾಗವಹಿಸಿದ್ದರು. ಸ್ಕೌಟರ್ ಶ್ರೀ ಜೀವನ್‌ರಾಮ್, ಪಥಸಂಚಲನವನ್ನು ನಡೆಸಿಕೊಟ್ಟರು.

ಹಳೇಬೀಡಿನಲ್ಲಿ ನಡೆದ ಸ್ವಾತಂತ್ರ್ಯೋತ್ಸವ ಪಥ. ಸಂಚಲನ ಕಾರ್ಯಕ್ರಮದಲ್ಲಿ ಎಸ್.ಜಿ.ಆರ್. ಶಾಲೆಯ ಸ್ಕೌಟ್-ಗೈಡ್‌ಗಳು ಭಾಗವಹಿಸಿದ್ದರು.

* ಹೊಳೆನರಸಿಪುರ ಮತ್ತು ಸಕಲೇಶಪುರದಲ್ಲಿ ನಡೆದ ಸ್ವಾತಂತ್ರ್ಯೋತ್ಸವ ಕಾರ್ಯಕ್ರಮದ ಪಥ ಸಂಚಲನದಲ್ಲಿ ಸ್ಕೌಟ್-ಗೈಡ್‌ಗಳು ಭಾಗವಹಿಸಿದ್ದರು.

* ಚನ್ನರಾಯಪಟ್ಟಣ ತಾಲ್ಲೂಕಿನ ಉದಯಪುರದ ಸ. ಪ್ರ.ದ.ಕಾಲೇಜ್‌ನಲ್ಲಿ ರೋವರ್‌ಗಳು ಸ್ವಾತಂತ್ರ್ಯೋತ್ಸವ ದಿನಾಚರಣೆಯನ್ನು ಅರ್ಥಪೂರ್ಣವಾಗಿ ನಡೆಸಿಕೊಟ್ಟಿರುತ್ತಾರೆ.

## ಕೊಪ್ಪಳ

70ನೇ ಸ್ವಾತಂತ್ರ್ಯ ದಿನಾಚರಣೆಯ ಪ್ರಯುಕ್ತ ಕೊಪ್ಪಳ ಜಿಲ್ಲಾ ಕ್ರೀಡಾಂಗಣದಲ್ಲಿ ನಡೆದ ಧ್ವಜಾರೋಹಣ ಕಾರ್ಯಕ್ರಮವನ್ನು ಉನ್ನತ ಶಿಕ್ಷಣ ಸಚಿವರಾದ ಶ್ರೀ ಬಸವರಾಜ ರಾಯರೆಡ್ಡಿ ನೆರವೇರಿಸಿದರು. ಈ ಕಾರ್ಯಕ್ರಮದಲ್ಲಿ ಜಿಲ್ಲಾ ಸ್ಕೌಟ್-ಗೈಡ್ಸ್ ಸಂಸ್ಥೆಯಿಂದ ಸ್ಕೌಟ್ಸ್-ಗೈಡ್ಸ್ ನ ಒಂಬತ್ತು ತಂಡಗಳು ಪಥಸಂಚಲನದಲ್ಲಿ ಭಾಗವಹಿಸಿದ್ದವು. ನಂತರ ವಿವಿಧ ಸ್ಥಬ್ದ ಚಿತ್ರಗಳ ಮೆರವಣಿಗೆ ನಡೆಯಿತು.

ಸ್ವಾಮಿ ವಿವೇಕಾನಂದ ಶಾಲೆಯ ಗೈಡ್ ತಂಡ ದ್ವಿತಿಯ ಸ್ಥಾನ ಪಡೆಯಿತು. ಜಿಲ್ಲಾ ಉನ್ನತ ಶಿಕ್ಷಣ ಸಚಿವರು ಹಾಗು ಕೊಪ್ಪಳ ಜಿಲ್ಲಾ ಉಸ್ತುವಾರಿ ಸಚಿವರಾದ ಶ್ರೀ ಬಸವರಾಜ ರಾಯರೆಡ್ಡಿಯವರು ವಿಜೇತ ತಂಡಕ್ಕೆ ಷೀಲ್ಡ್‌ನ್ನು ವಿತರಿಸಿದರು. ಈ ಕಾರ್ಯಕ್ರಮದಲ್ಲಿ ಕೊಪ್ಪಳ ವಿಧಾನಸಭಾ ಕ್ಷೇತ್ರದ ಶಾಸಕರಾದ ಶ್ರೀ ರಾಘವೇಂದ್ರ ಹಿಟ್ನಾಳ್, ಲೋಕಸಭಾ ಸದಸ್ಯರಾದ ಶ್ರೀ ಕರಡಿ ಸಂಗಣ್ಣ, ಜಿಲ್ಲಾಧಿಕಾರಿಗಳಾದ ಶ್ರೀಮತಿ ಕನಕವಲ್ಲಿ ಉಪಸ್ಥಿತರಿದ್ದರು.

## ಕೊಡಗು

ದಿನಾಂಕ : 15-08-2016 ರಂದು ಬೆಳಿಗ್ಗೆ ಜಿಲ್ಲಾ ಪ್ರಧಾನ ಆಯುಕ್ತರು ಸ್ಕೌಟ್ಸ್-ಗೈಡ್ಸ್ ಭವನದಲ್ಲಿ ಧ್ವಜಾರೋಹಣ ಮಾಡಿದರು. 70ನೇ ಸ್ವಾತಂತ್ರ್ಯ ದಿನದಂದು ಜಿಲ್ಲಾ ಸಂಸ್ಥೆಯವತಿಯಿಂದ ಜಿಲ್ಲಾಡಳಿತದಲ್ಲಿ ಆಚರಿಸಿದ ಸ್ವಾತಂತ್ರ್ಯ ದಿನಾಚರಣೆಯಲ್ಲಿ 9 ದಳಗಳು ಮತ್ತು ಒಂದು ರೇಂಜರ್ ದಳವು ಪಥಸಂಚಲನದಲ್ಲಿ ಭಾಗವಹಿಸಿದ್ದವು. ಈ ಸಂದರ್ಭದಲ್ಲಿ ಜಿಲ್ಲಾಡಳಿತವು ಉತ್ತಮವಾಗಿ ಪಥ ಸಂಚಲನ ಮಾಡಿದ ತುಕಡಿಗಳಿಗೆ ಪ್ರಶಸ್ತಿ ನೀಡಲು ತೀರ್ಮಾನಿಸಿದ್ದು, ಅದರಲ್ಲಿ ಪ್ರಥಮವಾಗಿ ಜನರಲ್ ತಿಮ್ಮಯ್ಯ ಸ್ಕೌಟ್ ದಳ, ದ್ವಿತಿಯ ಸ್ಥಾನ ಸಂತ ಮೈಕಲರ ಸ್ಕೌಟ್ಸ್ ದಳ, ತೃತೀಯ ಸ್ಥಾನವನ್ನು ರಾಜರಾಜೇಶ್ವರಿ ಶಾಲೆಯ ಸ್ಕೌಟ್ಸ್ ದಳವು ಪಡೆದು ಕೊಂಡಿತು.



ಇದೇ ಸಂದರ್ಭದಲ್ಲಿ ಉತ್ತಮ ಸೇವೆ ಸಲ್ಲಿಸುತ್ತಿರುವ ಶ್ರೀಮತಿ ಎಂ.ಬಿ. ಶೋಭ ಗೈಡ್ ಕ್ಯಾಪ್ಟನ್ ಶ್ರೀಮತಿ ಸುಲೋಚನ ಗೈಡ್ ಕ್ಯಾಪ್ಟನ್, ಶ್ರೀಮತಿ ಬಿ.ಬಿ. ಜಾಜಿ, ಇವರನ್ನು ಕೊಡಗು ಜಿಲ್ಲಾ ಉಸ್ತುವಾರಿ ಸಚಿವರಾದ ಶ್ರೀ ಸೀತಾರಾಂ, ವಿಧಾನ ಪರಿಷತ್ ಸದಸ್ಯೆ ಶ್ರೀಮತಿ ವೀಣಾ ಅಚ್ಚಯ್ಯ, ನಗರಸಭಾ ಅಧ್ಯಕ್ಷ ಶ್ರೀಮತಿ ಬಂಗೇರ ಸನ್ಮಾನಿಸಿದರು.

ರಾಜ್ಯ ಪುರಸ್ಕಾರ ಪಡೆದ ಮಕ್ಕಳಿಗೆ ಪ್ರಶಸ್ತಿ ಪತ್ರವನ್ನು ಸಚಿವರಿಂದ ನೀಡಲಾಯಿತು. ಇದೇ ಸಂದರ್ಭ. ಜಿಲ್ಲಾ ಪ್ರಧಾನ ಆಯುಕ್ತರಾದ ಶ್ರೀ ಕೆ.ಬಿ. ಕಾಳಪ್ಪ, ಖಜಾಂಚಿಯವರಾದ ಶ್ರೀ ಸೋಮಯ್ಯ, ಸ್ಕೌಟ್ಸ್, ಆಯುಕ್ತರಾದ ಶ್ರೀ ಜಿಮ್ಮಿ ಸಿಕ್ವೇರಾ ಜಿಲ್ಲಾ ಸಂಘಟಕರಾದ ಶ್ರೀಮತಿ ದಮಯಂತಿ ಗೈಡ್ ತರಬೇತಿ ಆಯುಕ್ತರಾದ ಶ್ರೀಮತಿ ಸಗಾಯ ಮೇರಿ, ಕಾರ್ಯದರ್ಶಿ ಡೇಸಿ, ಗೈಡ್ ಉಪಸ್ಥಿತರಿದ್ದರು.

## ಮೈಸೂರು

ದಿನಾಂಕ : 08-07-2016 ರಂದು ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಟಿ. ನರಸೀಪುರದಲ್ಲಿ ವನಮಹೋತ್ಸವ ಕಾರ್ಯಕ್ರಮ ನೆರವೇರಿತು. ರೋವರ್ಸ್-ರೇಂಜರ್ಸ್‌ಗಳು ಕಾಲೇಜಿನ ಮೈದಾನದಲ್ಲಿ ಸಸಿಗಳನ್ನು ನೆಟ್ಟರು.

* ದಿನಾಂಕ 09-07-2016 ರಿಂದ 10-07-2016 ರ ವರೆಗೆ ಶ್ರೀರಾಂಪುರ ಸ್ಥಳೀಯ ಸಂಸ್ಥೆಯ ವತಿಯಿಂದ ಸ್ಕೌಟ್ಸ್-ಗೈಡ್ಸ್‌ಗಳಿಗೆ ಪೆಟ್ರೋಲ್ ನಾಯಕರ ತರಬೇತಿ ಶಿಬಿರ ನಡೆಯಿತು. ಈ ಶಿಬಿರದಲ್ಲಿ 40 ಸ್ಕೌಟ್ಸ್, 30 ಗೈಡ್ಸ್, ಭಾಗವಹಿಸಿದ್ದರು. ಶ್ರೀ ಶಶಿಧರ್ ಹೆಚ್.ಡಬ್ಲ್ಯೂ.ಬಿ.(ಎಸ್) ರವರು ಸ್ಕೌಟ್ ವಿಭಾಗಕ್ಕೆ ಶ್ರೀಮತಿ ಗೀತಾ, ಗೈಡ್ ವಿಭಾಗಕ್ಕೆ ನಾಯಕ/ನಾಯಕಿಯರಾಗಿದ್ದರು.

* ದಿನಾಂಕ 11-07-2016 ರಿಂದ 12-07-2016 ರ ವರೆಗೆ ಮೈಸೂರು ಉತ್ತರ ವಲಯ ಸ್ಥಳೀಯ ಸಂಸ್ಥೆಯ ವತಿಯಿಂದ ಸ್ಕೌಟ್ಸ್-ಗೈಡ್ಸ್‌ಗಳಿಗೆ ದ್ವಿತೀಯ ಸೋಪಾನ ಶಿಬಿರವನ್ನು ಕೆ.ಪಿ. ಶಾಲೆಯಲ್ಲಿ ನಡೆಸಲಾಯಿತು. ಶಿಬಿರದಲ್ಲಿ 70 ಸ್ಕೌಟ್ಸ್ 50 ಗೈಡ್ಸ್ ಭಾಗವಹಿಸಿದ್ದರು. ಶ್ರೀ ಅರಳಪ್ಪ, ಶ್ರೀಮತಿ ಜಯಲಕ್ಷ್ಮಿ, ಸ್ಕೌಟ್ಸ್-ಗೈಡ್ಸ್ ವಿಭಾಗಕ್ಕೆ ನಾಯಕರಾಗಿ ಕಾರ್ಯ ನಿರ್ವಹಿಸಿದರು.

* ದಿನಾಂಕ 12-07-2016 ರಂದು ಮೈಸೂರು ತಾಲ್ಲೂಕು ಸ್ಥಳೀಯ ಸಂಸ್ಥೆಯ ಸ್ಕೌಟರ್ಸ್-ಗೈಡರ್ಸ್‌ಗಳ ಸಭೆ ಜಿಲ್ಲಾ ಸಂಸ್ಥೆಯಲ್ಲಿ ನೆರವೇರಿತು. 30 ಸ್ಕೌಟರ್ಸ್-ಗೈಡರ್ಸ್ ಸ್ಥಳೀಯ ಸಂಸ್ಥೆ-ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಸಭೆಯಲ್ಲಿ ಭಾಗವಹಿಸಿದ್ದರು.

* ದಿನಾಂಕ 22-07-2016 ರಂದು ಮೈಸೂರಿನ ಎ.ಸಿ.ಎಂ.ಇ. ಶಾಲೆಯಲ್ಲಿ ಕಬ್-ಬುಲ್‌ಬುಲ್, ಸ್ಕೌಟ್-ಗೈಡ್ ದಳಗಳ ಉದ್ಘಾಟನಾ ಸಮಾರಂಭ ನಡೆಯಿತು. ಶ್ರೀಮತಿ ಸುಜಯ ಜಂಟಿ ಕಾರ್ಯದರ್ಶಿಗಳು ಶ್ರೀ ಅಜಯ್‌ಕುಮಾರ್

ಜೈನ್, ಸ್ಥಾನಿಕ ಆಯುಕ್ತರು(ಸ್ಕೌ) ಶ್ರೀ ರಾಮಪ್ರಸಾದ್, ಜಿಲ್ಲಾ ಸಂಘಟಕರು ಭಾಗವಹಿಸಿದ್ದರು. ಶ್ರೀ ಕೃಷ್ಣ ರೋಟೇರಿಯನ್‌ರವರು ಅತಿಥಿಗಳಾಗಿ ಆಗಮಿಸಿದ್ದರು. ಶಾಲೆಯ ಕಾರ್ಯದರ್ಶಿಗಳಾದ ಶ್ರೀ ರವೀಂದ್ರರವರು ಸಭೆಯ ಅಧ್ಯಕ್ಷತೆ ವಹಿಸಿದ್ದರು.

* ದಿನಾಂಕ 14-07-2016 ರಿಂದ 16-07-2016 ರ ವರೆಗೆ ಮೈಸೂರಿನ ಜಿಲ್ಲಾ ಸಂಸ್ಥೆಯಲ್ಲಿ ತೃತೀಯ ಸೋಪಾನ ಶಿಬಿರ ನಡೆಯಿತು. ಈ ಶಿಬಿರದಲ್ಲಿ ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ಶ್ರೀ ಚಂದ್ರು ಹೆಚ್.ಡಬ್ಲ್ಯೂ.ಬಿ.(ಎಸ್.) ರವರು ಸ್ಕೌಟ್ ವಿಭಾಗಕ್ಕೆ ನಾಯಕರಾಗಿದ್ದರು.

* ದಿನಾಂಕ 16-07-2016 ರಂದು ಚತುರ್ಥಚರಣ್ / ಹೀರಕ್ ಪಂಕ್ ಕಬ್ಸ್-ಬುಲ್‌ಬುಲ್ಸ್‌ಗಳ ತರಬೇತಿ ಶಿಬಿರ ನೆರವೇರಿತು. ಶ್ರೀಮತಿ ರಾಧಮ್ಮ ಎಲ್.ಟಿ.(ಸಿ.) ಡಿ.ಟಿ.ಸಿ.(ಎಸ್) ಹಾಗೂ ಶ್ರೀಮತಿ ರತ್ನಕುಮಾರಿ ಹೆಚ್.ಡಬ್ಲ್ಯೂ.ಬಿ(ಬಿ) ರವರು ಕಬ್ ಮತ್ತು ಬುಲ್ ಬುಲ್ ವಿಭಾಗದ ನಾಯಕಿಯರಾಗಿ ಕಾರ್ಯ ನಿರ್ವಹಿಸಿದರು.



* ದಿನಾಂಕ : 06-08-2016 ರಂದು ಜಿಲ್ಲಾ ಸಂಸ್ಥೆಯಲ್ಲಿ ವಿಶ್ವ ಸ್ಕಾರ್ಫ್ ದಿನವನ್ನು ಆಚರಿಸಲಾಯಿತು. ಶ್ರೀ ಪಿ. ವಿಶ್ವನಾಥ್, ಜಿಲ್ಲಾ ಮುಖ್ಯ ಆಯುಕ್ತರು, ಡಾ. ಜಿ. ಸಿದ್ದೇಶ್, ಉಪಾಧ್ಯಕ್ಷರು, ಜಿಲ್ಲಾ ಸಂಸ್ಥೆ, ಮೈಸೂರು ಶ್ರೀ ಸನ್ನಿ ಪಿ. ಜೋಸ್, ಪ್ರಾಂಶುಪಾಲರು, ಬೇಡನ್ ಪೋವೆಲ್ ಶಾಲೆ, ಮೈಸೂರು ಶ್ರೀಮತಿ ಸುಜಯ, ಜಂಟಿ ಕಾರ್ಯದರ್ಶಿ, ಜಿಲ್ಲಾ ಸ್ಥಾನಿಕ ಆಯುಕ್ತರುಗಳಾದ ಶ್ರೀ ಎಂ.ಎನ್. ಸುರೇಶ್ ಕುಮಾರ್, ಶ್ರೀ ಅಜಯ್ ಕುಮಾರ್ ಜೈನ್, ಶ್ರೀಮತಿ ಮನೋಹರ್ ಪ್ರಭ, ಜಿಲ್ಲಾ ತರಬೇತಿ ಆಯುಕ್ತರು (ಗೈ) ಜಿಲ್ಲಾ ಸಂಘಟಕರುಗಳಾದ ಶ್ರೀ ರಾಮ ಪ್ರಸಾದ್, ಶ್ರೀ ಚಂದ್ರು, ಪಿ. ಜಿಲ್ಲಾ ಕ್ವಾರ್ಟರ್ ಮಾಸ್ಟರ್ ಶ್ರೀ ಆರ್.ಪಿ. ಚಂದ್ರುರವರು ಮತ್ತು ಬೇಡನ್ ಪೋವೆಲ್ ಶಾಲೆ, ಮೈಸೂರಿನ ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

* ದಿನಾಂಕ 15-08-2016 ರಂದು ಶಾಂತಿಪುರ ಹೆಚ್.ಡಿ.ಕೋಟೆ ತಾಲ್ಲೂಕಿನಲ್ಲಿ 70ನೇ ಸ್ವಾತಂತ್ರ್ಯ ದಿನಾಚರಣೆಯನ್ನು "ನಿರಾಶ್ರಿತ ಮಾನಸಿಕ ಅಸ್ವಸ್ಥರ ತಾಣ" ಚಿತ್ತಧಾಮದಲ್ಲಿ ಆಚರಿಸಲಾಯಿತು. ನ್ಯಾಯಾಧೀಶರಾದ ಶ್ರೀ ಸರ್ಫರೋಜ್ ಹುಸೇನ್ ಕಿತ್ತೂರು, ಹೆಚ್ಚುವರಿ ನ್ಯಾಯಾಧೀಶರಾದ ಶ್ರೀ ಕೆ. ಕೇಶವ್ ರವರು ಹಾಗೂ ಜಿಲ್ಲಾ ಸಂಘಟಕ ಶ್ರೀ ಅಶೋಕ್ ಕುಮಾರ್, ಚಾಮರಾಜನಗರ, ಗ್ರಾಮದ ಗ್ರಾಮಸ್ಥರು ಸೇರಿ ಧ್ವಜಾರೋಹಣ ನೆರವೇರಿಸಿದರು. ಸಸಿಗೆ ಮಾನಸಿಕ ಅಸ್ವಸ್ಥರು ಹಾಗೂ ನ್ಯಾಯಾಧೀಶರುಗಳು ನೀರು ಹಾಯಿಸುವುದರ ಮೂಲಕ ಕಾರ್ಯಕ್ರಮವನ್ನು ಉದ್ಘಾಟಿಸಿದರು.

* ದಿನಾಂಕ 20-08-2016 ರಂದು ಜಿಲ್ಲಾ ಸಂಸ್ಥೆಯಲ್ಲಿ ಸದ್ಭಾವನಾ ದಿನವನ್ನು ಆಚರಿಸಲಾಯಿತು. ಸಭೆಯ ಅಧ್ಯಕ್ಷತೆಯನ್ನು ಡಾ.ಕೆ.ಬಿ. ಗುರುಮೂರ್ತಿ, ಜಿಲ್ಲಾ ಖಜಾಂಚಿಯವರು ವಹಿಸಿದ್ದರು. ಶ್ರೀ ಚಂದ್ರಶೇಖರ್, ಉಪನ್ಯಾಸಕರು, ವಿದ್ಯಾವರ್ಧಕ ಪ್ರಥಮ ದರ್ಜೆ ಕಾಲೇಜು, ಮೈಸೂರು ಇವರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಡಾ.ಜಿ. ಸಿದ್ದೇಶ್, ಉಪಾಧ್ಯಕ್ಷರು, ಜಿಲ್ಲಾ ಸಂಸ್ಥೆ, ಮೈಸೂರು, ಶ್ರೀ ಅಬ್ದುಲ್ ಜಮೀಲ್, ಜಿಲ್ಲಾ ಕಾರ್ಯದರ್ಶಿಗಳು, ಶ್ರೀ ಸನ್ನಿ ಪಿ. ಜೋಸ್, ಪ್ರಾಂಶುಪಾಲರು, ಬೇಡನ್ ಪೋವೆಲ್ ಶಾಲೆ, ಮೈಸೂರು, ಶ್ರೀಮತಿ ಸುಜಯ, ಜಂಟಿ ಕಾರ್ಯದರ್ಶಿ, ಜಿಲ್ಲಾ ಸ್ಥಾನಿಕ ಆಯುಕ್ತರಾದ ಶ್ರೀ ಆಜಯ್ ಕುಮಾರ್ ಜೈನ್, ಶ್ರೀಮತಿ ಮನೋಹರ ಪ್ರಭ, ಜಿಲ್ಲಾ ತರಬೇತಿ ಆಯುಕ್ತರು(ಗೈ) ಉಪಸ್ಥಿತರಿದ್ದರು.

ಶ್ರೀ ರಾಜೀವ್‌ಗಾಂಧಿ ಯವರ ಬಗ್ಗೆ ಮಾತನಾಡಿದ ಶ್ರೀ ಚಂದ್ರಶೇಖರ್, ಮೊದಲು ನಮ್ಮಲ್ಲಿ ನಾವು ಶಾಂತಿಯನ್ನು ಬೆಳೆಸಿಕೊಳ್ಳಬೇಕು. ಅಜ್ಞಾನದಿಂದ ಜ್ಞಾನದ ಕಡೆಗೆ ಹೋಗಲು ಶಾಂತಿ ಮತ್ತು ಸಹಬಾಳ್ವೆ ಮುಖ್ಯ ಎಂದರು. ಡಾ. ಜಿ. ಸಿದ್ದೇಶ್ ರವರು ನಮ್ಮಲ್ಲಿ ಒಳ್ಳೆಯ ಭಾವನೆಗಳು ಇದ್ದಲ್ಲಿ ನಮಗೆ ಜಯ ದೊರಕುತ್ತದೆ. ನಾವು ಉತ್ತಮ ಪ್ರಜೆಗಳಾಗಲು ನಮ್ಮಲ್ಲಿ ಒಳ್ಳೆಯ ಗುಣಗಳನ್ನು ನಾವು ಬೆಳೆಸಿಕೊಳ್ಳಬೇಕು ಎಂದರು.

ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದ ಡಾ. ಕೆ.ಬಿ. ಗುರುಮೂರ್ತಿ ಯವರು ಇಂದಿನ ದಿನಗಳಲ್ಲಿ ನಾವು ಶಾಂತಿ ಮತ್ತು ಸಹಬಾಳ್ವೆಯಿಂದ ಬದುಕುವುದು ಉತ್ತಮ ಎಂದರು.

ಈ ಸಂದರ್ಭದಲ್ಲಿ ಎಸ್.ಎಸ್.ಎಲ್.ಸಿ. ಯಲ್ಲಿ 90% ಅಂಕ ಪಡೆದ ವಿದ್ಯಾರ್ಥಿಗಳಿಗೆ ಸನ್ಮಾನ ಮಾಡಲಾಯಿತು. ಪ್ರಾರಂಭದಲ್ಲಿ ಶ್ರೀ ಅಬ್ದುಲ್ ಜಮೀಲ್, ಜಿಲ್ಲಾ ಕಾರ್ಯದರ್ಶಿಗಳು ಸ್ವಾಗತ ಕೋರಿದರು. ಶ್ರೀಮತಿ ಸುಜಯ, ಜಂಟಿ ಕಾರ್ಯದರ್ಶಿಗಳು ವಂದನಾರ್ಪಣೆಯನ್ನು ಮಾಡಿದರು.

## ರಾಯಚೂರು

ದಿನಾಂಕ : 30-06-2016 ರಂದು ರಾಯಚೂರು ನಗರದ ಜಿಲ್ಲಾ ಸ್ಕೌಟ್ ಭವನದಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಆಯೋಜಿಸಿದ್ದ ಜಿಲ್ಲಾ ಮಟ್ಟದ ಸ್ಕೌಟರ್ಸ್-ಗೈಡರ್ಸ್ ಸಮಾವೇಶ ಹಾಗು ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್ ಬುಲ್ಸ್‌ಗಳಿಗೆ ರಾಜ್ಯ ಪುರಸ್ಕಾರ ಪ್ರಶಸ್ತಿ ಪತ್ರಗಳ ವಿತರಣಾ ಸಮಾರಂಭ ಉದ್ಘಾಟಿಸಿ, ಮಾತನಾಡುತ್ತಾ ಯುವಜನತೆಯಲ್ಲಿ ಮಾನವೀಯ ಮೌಲ್ಯ ಬೆಳೆಸುವಲ್ಲಿ ಸ್ಕೌಟ್-ಗೈಡ್ ತರಬೇತಿ ಉತ್ತಮ ಸಹಕಾರಿಯಾಗಲಿದೆ ಎಂದು ರಾಯಚೂರು ಜಿಲ್ಲಾ ಪಂಚಾಯತ್ ಅಧ್ಯಕ್ಷೆ ಹಾಗೂ ಜಿಲ್ಲಾ ಸ್ಕೌಟ್ಸ್ ಸಂಸ್ಥೆಯ ಉಪಾಧ್ಯಕ್ಷೆ ಶ್ರೀಮತಿ ವೀರಲಕ್ಷ್ಮೀ ಪರಮೇಶಪ್ಪ ಆದಿಮನಿ ಇವರು ಅಭಿಪ್ರಾಯಪಟ್ಟರು.

ಮುಖ್ಯ ಅತಿಥಿಗಳಾಗಿ ಭಾಗವಹಿಸಿದ ಶ್ರೀ ಎಸ್.ಎಸ್. ಕುಂಬಾರ, ಉಪನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ, ರಾಯಚೂರು ಇವರು ಮಾತನಾಡಿ, ಸ್ಕೌಟ್ಸ್ ಸಂಸ್ಥೆಯು ಯುವಕರ ಜೀವನ ಮೌಲ್ಯಗಳನ್ನು ಬೆಳೆಸುವಲ್ಲಿ ಪ್ರಧಾನ ಪಾತ್ರವಹಿಸುತ್ತಿದೆ. ಯುವ ಸಮೂಹದಲ್ಲಿ ಶಿಸ್ತು, ಸಂಯಮ ತಾಳ್ಮೆ, ಸಮಯಪಾಲನೆ, ಕರ್ತವ್ಯನಿಷ್ಠೆ, ಪ್ರಾಮಾಣಿಕತೆ, ಮಾನವೀಯ ಮೌಲ್ಯಗಳನ್ನು ಕಲಿಸುವ ಮೂಲಕ ಯುವಶಕ್ತಿಗೆ ಪ್ರೇರಣೆಯಾಗಿದೆ ಎಂದರು. ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಕೆ. ತಿಮ್ಮಯ್ಯ ಮಾತನಾಡಿ, ಉತ್ತರ ಕರ್ನಾಟಕದ ಭಾಗದಲ್ಲಿ ರಾಯಚೂರು ಜಿಲ್ಲಾ ಸಂಸ್ಥೆಯು ಸ್ಕೌಟ್ಸ್-ಗೈಡ್ಸ್ ಚಳುವಳಿಯನ್ನು ಉತ್ತಮ ರೀತಿಯಿಂದ ಕಾರ್ಯನಿರ್ವಹಿಸುತ್ತಿದ್ದು, ಜಿಲ್ಲೆಯಲ್ಲಿ ಪ್ರತಿವರ್ಷ ರಾಜ್ಯ ಪುರಸ್ಕಾರ, ರಾಷ್ಟ್ರಪತಿ ಪುರಸ್ಕಾರ ಪ್ರಶಸ್ತಿಗಳು ಹೆಚ್ಚಿನ ಸಂಖ್ಯೆಯಲ್ಲಿ ಆಗುತ್ತಿದ್ದು, ಇದಕ್ಕೆ ಪೂರಕವಾಗಿ ಜಿಲ್ಲಾ ಪಂಚಾಯತ್, ತಾಲೂಕು ಪಂಚಾಯತ್, ನಗರ ಸಭೆ, ಪುರಸಭೆ, ಪಟ್ಟಣ ಪಂಚಾಯತ್ ಹಾಗೂ ಗ್ರಾಮ ಪಂಚಾಯತಿಗಳು ಸಂಸ್ಥೆಗೆ ಆರ್ಥಿಕ ನೆರವು ನೀಡುವಂತೆ ಮನವಿ ಮಾಡಿದರು. ಈ ಸಂದರ್ಭದಲ್ಲಿ 2015ನೇ ಸಾಲಿನಲ್ಲಿ ರಾಜ್ಯಪಾಲರ ಪ್ರಶಸ್ತಿ ಪಡೆದ ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್‌ಗಳಿಗೆ ಜಿಲ್ಲಾ ಪಂಚಾಯತ್ ಅಧ್ಯಕ್ಷರು ಪ್ರಶಸ್ತಿ ಪತ್ರಗಳನ್ನು ವಿತರಿಸಿದರು. ಈ ಸಂದರ್ಭದಲ್ಲಿ ಜಿಲ್ಲಾ ಕಾರ್ಯದರ್ಶಿ ಶ್ರೀ ಹೆಚ್. ಹನುಮಂತಪ್ಪ, ಸಿಂಧನೂರು ಸ್ಥಳೀಯ ಸಂಸ್ಥೆಯ 155 ಸ್ಕೌಟರ್ಸ್-ಗೈಡರ್ಸ್‌ಗಳು 90 ಕಬ್ಸ್-ಬುಲ್‌ಬುಲ್ಸ್, ಸ್ಕೌಟ್ಸ್-ಗೈಡ್ಸ್ ಭಾಗವಹಿಸಿದ್ದರು. ಶ್ರೀಮತಿ ಕೆ. ಆಲಿಯಾ ಖಾನಂ ಜಿಲ್ಲಾ ಖಜಾಂಚಿಗಳು ಸ್ವಾಗತಿಸಿದರು. ಶ್ರಿ ಅಮರೇಗೌಡ ಪಾಟೀಲ್ ಜಿಲ್ಲಾ ಆಯುಕ್ತರು (ಸ್ಕೌ) ಪ್ರಾಸ್ತಾವಿಕವಾಗಿ ಮಾತನಾಡಿದರು. ಶ್ರೀಮತಿ ಅಜೀಜಾ ಸುಲ್ತಾನ ಜಿಲ್ಲಾ ಆಯುಕ್ತರು(ಗೈ) ವಂದಿಸಿದರು. ಶ್ರೀ ರಾಮದಾಸ ಸ್ಕೌಟ್ ಮಾಸ್ಟರ್ ಇವರು ನಿರೂಪಿಸಿದರು.

* ದಿನಾಂಕ: 15-08-2016 ರಂದು ರಾಯಚೂರು ನಗರದ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಪ್ರಧಾನ ಕಾರ್ಯಾಲಯದಲ್ಲಿ 70ನೇ ಸ್ವಾತಂತ್ರ್ಯೋತ್ಸವದ ದಿನಾಚರಣೆ ಅಂಗವಾಗಿ ರಾಷ್ಟ್ರಧ್ವಜಾರೋಹಣವನ್ನು ಶ್ರೀ ಕೆ. ತಿಮ್ಮಯ್ಯ ಜಿಲ್ಲಾ ಮುಖ್ಯ ಆಯುಕ್ತರು ಇವರು ನೆರವೇರಿಸಿದರು. ನಂತರ ಅವರು ಮಾತನಾಡಿ, ದೇಶಭಕ್ತರ ಪ್ರಾಣ, ತ್ಯಾಗ, ಬಲಿದಾನದ ಫಲವೆ

ಈ ನಮ್ಮ ಭವ್ಯ ಭಾರತ. ದೇಶ ಸ್ವಾತಂತ್ರ್ಯ ಪಡೆಯಬೇಕಾದರೆ ನಮ್ಮ ದೇಶದ ಅನೇಕ ಮಹಾತ್ಮರು ತಮ್ಮ ಪ್ರಾಣವನ್ನು ಪಣಕ್ಕಿಟ್ಟು, ಭವ್ಯ ಭಾರತಕ್ಕೆ ಸ್ವಾತಂತ್ರ್ಯ ದೊರಕಿಸಿ ಕೊಟ್ಟಿರುತ್ತಾರೆ. ಆದ್ದರಿಂದ ನಾವೆಲ್ಲರೂ ಇಂದು ಸಂತೋಷದಿಂದ ಬಾಳಲು ಸಾಧ್ಯವಾಗಿದೆ ಎಂದರು.

ನಂತರ ಜಿಲ್ಲಾ ಪೊಲೀಸ್ ಪರೇಡ್ ಮೈದಾನದಲ್ಲಿ ನಡೆದ ಸಾಮೂಹಿಕ ಧ್ವಜಾರೋಹಣವನ್ನು ಮಾನ್ಯ ಪ್ರಾಥಮಿಕ ಮತ್ತು ಪ್ರೌಢಶ ಶಿಕ್ಷಣ ಸಚಿವರು ಹಾಗೂ ರಾಯಚೂರು ಜಿಲ್ಲಾ ಉಸ್ತುವಾರಿ ಸಚಿವರಾದ ಸನ್ಮಾನ್ಯಶ್ರೀ ತನ್ವೀರ್ ಶೇಠ್ ರವರು ನೆರವೇರಿಸಿದರು. ನಂತರ ಅವರು ವಿವಿಧ ತಂಡಗಳಿಂದ ಗೌರವ ವಂದನೆಯನ್ನು ಸ್ವೀಕರಿಸಿದರು. ಪಥಸಂಚಲನದಲ್ಲಿ ಭಾಗವಹಿಸಿದ ಸರಕಾರಿ ಪ್ರೌಢಶಾಲೆ ಜಹೀರಬಾದ್, ರಾಯಚೂರು, ಗೈಡ್ಸ್ ತಂಡವು ಉತ್ತಮ ಪ್ರದರ್ಶನ ನೀಡಿ ಪ್ರಥಮ ಸ್ಥಾನವನ್ನು ಪಡೆದರೆ ಸೇಂಟ್ ಮೇರಿಜ್ ಕಾನ್ವೆಂಟ್ ಶಾಲೆಯ ಗೈಡ್ ತಂಡ ಹಾಗು ಸರಕಾರಿ ಮಾದರಿಯ ಹಿರಿಯ ಪ್ರಾಥಮಿಕಶಾಲೆ, ಪೊಲೀಸ್ ಕಾಲೋನಿ ಗೈಡ್ ತಂಡಗಳು ಸಮಾದಾನಕರ ಪ್ರಶಸ್ತಿಗಳನ್ನು ಪಡೆದವು ಈ ಪಥಸಂಚಲನದಲ್ಲಿ ಮೂರು ಗೈಡ್ ತಂಡಗಳು ಭಾಗವಹಿಸಿದ್ದವು.

## ಶಿವಮೊಗ್ಗ



08 ಆಗಸ್ಟ್ 2016 ರಂದು ಸರ್ಕಾರಿ ಪ್ರಥಮ ದರ್ಜೆ ಕಲಾ/ವಾಣಿಜ್ಯ ಕಾಲೇಜ್, ಹೊಸಮನೆ ಭದ್ರಾವತಿಯಲ್ಲಿ ಶ್ರೀ ಟಿ.ಎಸ್. ರಾಮಚಂದ್ರ ಪ್ರಾಂಶುಪಾಲರು ಸರ್.ಎಂ.ವಿ. ಕಾಲೇಜ್, ಭದ್ರಾವತಿ ಇವರ ಅಧ್ಯಕ್ಷತೆಯಲ್ಲಿ ಒಂದು ದಿವಸದ ಪುನಶ್ಚೇತನ ಶಿಬಿರವನ್ನು ಏರ್ಪಡಿಸಲಾಗಿತ್ತು. ಕಾರ್ಯದರ್ಶಿಯವರಾದ ಶ್ರೀ ಜಿ.ಟಿ. ಗುರುಲಿಂಗಪ್ಪ ಎಲ್ಲರನ್ನು ಸ್ವಾಗತಿಸಿದರು. ಹಿರಿಯ ಸ್ಕೌಟ್ ಮಾಸ್ಟರ್ ಶ್ರೀ ಎಂ.ಕೆ. ಕೃಷ್ಣಸ್ವಾಮಿಯವರು ದೀಪ ಬೆಳಗಿಸಿ ಶಿಬಿರದ ಉದ್ಘಾಟನೆಯನ್ನು ಮಾಡಿದರು. ಅವರು ಎಲ್ಲಾ ಸ್ಕೌಟರ್-ಗೈಡರ್, ರೋವರ್-ರೇಂಜರ್‌ಗಳು ಈ ಶಿಬಿರಗಳಲ್ಲಿ ಭಾಗವಹಿಸಿ ಹೆಚ್ಚಿನ ಮಾಹಿತಿಗಳನ್ನು ಪಡೆದುಕೊಂಡು ತಮ್ಮ ತಮ್ಮ ದಳಗಳನ್ನು ಉತ್ತಮವಾಗಿ ನಡೆಸಿ, ಶಿಬಿರ ಯಶಸ್ವಿಯಾಗಲಿ ಎಂದು ನುಡಿದರು. ಅಧ್ಯಕ್ಷೀಯ ನುಡಿಗಳಲ್ಲಿ ಪ್ರಾಂಶುಪಾಲರು ಈ ಕಾರ್ಯಕ್ರಮ ಹಮ್ಮಿಕೊಂಡಿರುವುದು ನಮಗೆ ಬಹಳ ಖುಷಿಯಾಗಿದೆ. ಈ ಶಿಬಿರದ ಸದುಪಯೋಗವನ್ನು ಎಲ್ಲರೂ ಪಡೆದುಕೊಂಡು ಉತ್ತಮವಾದ ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳನ್ನು ರಾಜ್ಯಮಟ್ಟ ರಾಷ್ಟ್ರಮಟ್ಟಕ್ಕೆ ತಯಾರುಮಾಡಿ ಎಂಬುದಾಗಿ, ನುಡಿದರು. ಶ್ರೀಮತಿ ನಿವೇದಿತಾ, ರೇಂಜರ್ ಲೀಡರ್‌ರವರು ಎಲ್ಲರಿಗೂ ವಂದಿಸಿದರು. ಶ್ರೀ ರೇವಣಸಿದ್ದಪ್ಪ ರೋವರ್ಸ್ ಲೀಡರ್ ಕಾರ್ಯಕ್ರಮವನ್ನು ನಿರೂಪಿಸಿದರು. ಶಿಬಿರದ ನಾಯಕತ್ವವನ್ನು ಶ್ರೀ ಹೆಚ್. ಶಿವಶಂಕರ್, ಶ್ರೀಮತಿ ಅರುಣಮಾಲಾ ವಹಿಸಿಕೊಂಡಿದ್ದರು. ಈ ಶಿಬಿರದಲ್ಲಿ 50 ಸ್ಕೌಟರ್-ಗೈಡರ್, ರೋವರ್ ಲೀಡರ್, ರೇಂಜರ್ ಲೀಡರ್ ಭಾಗವಹಿಸಿದ್ದರು.



ದಿನಾಂಕ 16-08-2016 ರಂದು ಶಿವಮೊಗ್ಗದ ಅಂಬೇಡ್ಕರ್ ಭವನದಲ್ಲಿ ದಿ॥ ವಿ.ಪಿ. ದೀನದಯಾಳು ನಾಯ್ಡುರವರ ಜನ್ಮ ಶತಮಾನೋತ್ಸವದ ಉದ್ಘಾಟನಾ ಕಾರ್ಯಕ್ರಮವು ನಡೆಯಿತು. ಶ್ರೀ ವಿ.ಪಿ. ದೀನದಯಾಳು ನಾಯ್ಡುರವರ ಬಗ್ಗೆ ಜಿಲ್ಲಾ ಕಾರ್ಯದರ್ಶಿ ಶ್ರೀ ಕೆ.ಪಿ. ಬಿಂದುಕುಮಾರ ರವರು ಸವಿಸ್ತಾರವಾಗಿ ಪರಿಚಯಿಸಿದರು. ತದನಂತರ ಶ್ರೀ ಕೆ.ಬಿ. ಪ್ರಸನ್ನಕುಮಾರ್ ಶಾಸಕರು ಶ್ರೀ ವಿ.ಪಿ. ದೀನದಯಾಳು ನಾಯ್ಡುರವರ ಪ್ರತಿಮೆಯ ಮುಂಭಾಗದ ದೀಪವನ್ನು

ಬೆಳಗಿಸುವುದರ ಮೂಲಕ ಜನ್ಮ ಶತಮಾನೋತ್ಸವ ಕಾರ್ಯಕ್ರಮವನ್ನು ಉದ್ಘಾಟಿಸಿದರು. ಅವರು ಉದ್ಘಾಟನಾ ನುಡಿಯನ್ನು ನುಡಿಯುತ್ತಾ ಸ್ಕೌಟ್-ಗೈಡ್‌ಗಳಲ್ಲಿ ತೊಡಗಿಸಿಕೊಳ್ಳುವ ಮಕ್ಕಳು ಸಮಾಜದಲ್ಲಿ ಸಾಮಾನ್ಯ ಮಕ್ಕಳಿಗಿಂತ ಭಿನ್ನ ಅಲ್ಲದೆ ಸ್ಕೌಟ್ ಮತ್ತು ಗೈಡ್‌ಗಳಿಗೆ ಬದುಕಿನ ಪಾಠ ಕಲಿಸುತ್ತದೆ. ಹೀಗಾಗಿ ಪ್ರಾಥಮಿಕ ಹಂತದಲ್ಲಿ ಮಕ್ಕಳಲ್ಲಿ ಶಿಸ್ತು, ಸಂಯಮ ಬೆಳೆಯಬೇಕಾದರೆ ಪೋಷಕರು ತಮ್ಮ ಮಕ್ಕಳನ್ನು ಸ್ಕೌಟ್ ಮತ್ತು ಗೈಡ್ಸ್‌ನಲ್ಲಿ ತೊಡಗಿಸಿಕೊಳ್ಳುವಂತೆ ಮಾಡುವುದು ಅತ್ಯವಶ್ಯಕ ಎಂದರು. ಹಾಗೇ ಮುಖ್ಯ ಅತಿಥಿಯಾಗಿ ಬಂದಂತಹ ಮಹಾನಗರ ಪಾಲಿಕೆ ಮೇಯರ್ ಶ್ರೀ ಎಸ್.ಕೆ. ಮರಿಯಪ್ಪರವರು ಮಾತನಾಡಿ ಜೀವನದಲ್ಲಿ ಮೌಲ್ಯಯುತ ಗುಣಗಳನ್ನು ಮೈಗೂಡಿಸಿಕೊಂಡು ಸಮಾಜದ ಆಸ್ತಿಗಳಾಗಿ ರೂಪುಗೊಳ್ಳಬೇಕೆಂದು ಕರೆ ನೀಡಿದರು. ಇನ್ನೊಬ್ಬ ಅತಿಥಿಯಾಗಿ ಭಾಗವಹಿಸಿದ ಸಾ.ಶಿ.ಇ. ಉಪನಿರ್ದೇಶಕರಾದ ಶ್ರೀ ಪಿ.ಎಸ್. ಮಚಾಡೊ ರವರು ಮಾತನಾಡಿ ಸ್ಕೌಟ್-ಗೈಡ್‌ಗಳಲ್ಲಿ ಚಿಕ್ಕಂದಿನಿಂದಲೇ ಶಿಸ್ತು ಬೆಳೆಸಿಕೊಂಡಿರುವುದರಿಂದ ಮುಂದಿನ ದಿನಗಳಲ್ಲಿ ಒಳ್ಳೆ ನಾಗರಿಕರಾಗಲು ಇದು ಸಹಕಾರಿಯಾಗಿದೆ. ಈ ಸಂಸ್ಥೆಯ ಪ್ರತಿಯೊಂದು ಚಟುವಟಿಕೆ ಕಾರ್ಯಕ್ರಮಕ್ಕೆ ಶಿಕ್ಷಣ ಇಲಾಖೆಯಿಂದ ಆಗುವಂತಹ ಯಾವುದೇ ಕಾರ್ಯವನ್ನು ನಾನು ಮಾಡಿಸಿಕೊಡುವುದಾಗಿ ತಿಳಿಸಿದರು. ಡಯಟ್ ಉಪ-ಪ್ರಾಂಶುಪಾಲರಾದ ಶ್ರೀಮತಿ ಸುಮಂಗಳಾ ರವರು ಮಾತನಾಡಿ ಹಿಂದೆ ಆದ ರ್‍ಯಾಲಿಯ ವಿಷಯವನ್ನು ಮೇಲುಕು ಹಾಕಿ ಸ್ಕೌಟ್-ಗೈಡ್‌ಗಳಿಗೆ ಶುಭ ಕೋರಿದರು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಹೆಚ್.ಡಿ. ರಮೇಶ ಶಾಸ್ತ್ರಿ ರವರು ಅಧ್ಯಕ್ಷೀಯ ನುಡಿ ನುಡಿಯುತ್ತಾ ದಿವಂಗತ ಶ್ರೀ ವಿ.ಪಿ. ದೀನದಯಾಳು ನಾಯ್ಡುರವರಂತೆ ನಿಮ್ಮಲ್ಲೊಬ್ಬರಾದರು ಆದರೆ ನಾವು ಮಾಡಿದ ಈ ಜನ್ಮ ಶತಮಾನೋತ್ಸವ ಕಾರ್ಯಕ್ರಮವು ಸಾರ್ಥಕವಾಗುವುದು ಎಂದರು. ಜಿಲ್ಲಾ ಖಜಾಂಚಿ ಶ್ರೀ ಹೆಚ್. ಪರಮೇಶ್ವರರವರು ವಿವಿಧ ತಾಲೂಕಿನ ಸ್ಥಳೀಯ ಕಾರ್ಯದರ್ಶಿಗಳು, ಸ್ಕೌಟರ್-ಗೈಡರ್‌ಗಳು ಹಾಗೂ ನಗರ ಶಾಲೆಯ 350 ಸ್ಕೌಟ್-ಗೈಡ್, ಕಬ್-ಬುಲ್‌ಬುಲ್, ರೋವರ್-ರೇಂಜರ್‌ಗಳು ಉಪಸ್ಥಿತರಿದ್ದರು. ಡಿ.ಸಿ.(ಎಸ್) ಶ್ರೀ ಉಮೇಶ ಶಾಸ್ತ್ರಿ ರವರು ಸ್ವಾಗತಿಸಿರು. ಡಿ.ಸಿ.(ಜಿ) ಶ್ರೀಮತಿ ಎಸ್.ಆರ್. ವಿಜಯಲಕ್ಷ್ಮಿ ರವರು ವಂದಿಸಿದರು. ಡಿ.ಟಿ.ಸಿ(ಎಸ್) ಶ್ರೀ ರಾಜೇಶ್ ಎ.ವಿ. ರವರು ನಿರೂಪಕರಾಗಿ ಕಾರ್ಯನಿರ್ವಹಿಸಿದರು.

* ಆಗಸ್ಟ್ 15ರಂದು ಜಿಲ್ಲಾ ಕಚೇರಿಯಲ್ಲಿ ಬೆಳಿಗ್ಗೆ 7-30 ಕ್ಕೆ ಸರಿಯಾಗಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಹೆಚ್. ಡಿ. ರಮೇಶ ಶಾಸ್ತ್ರಿ ರವರು ಧ್ವಜಾರೋಹಣ ಮಾಡಿ ವಂದನೆಯನ್ನು ಸ್ವೀಕರಿಸಿ ನಂತರದಲ್ಲಿ ಮಕ್ಕಳನ್ನುದ್ದೇಶಿಸಿ ಮಾತನಾಡಿ ಎಲ್ಲರಿಗೂ ಶುಭ ಕೋರಿದರು. ಈ ಸಂದರ್ಭದಲ್ಲಿ ಶ್ರೀ ರಮೇಶ ಶಾಸ್ತ್ರಿ, ಶ್ರೀಮತಿ ಎಸ್.ಆರ್. ವಿಜಯಲಕ್ಷ್ಮಿ ಜಿಲ್ಲಾ ಕಾರ್ಯದರ್ಶಿ ಶ್ರೀ ಕೆ.ಪಿ. ಬಿಂದುಕುಮಾರ, ಜಿಲ್ಲಾ ಖಜಾಂಚಿ ಶ್ರೀ ಹೆಚ್. ಪರಮೇಶ್ವರ, ಎ.ಎಸ್.ಓ.ಸಿ., ಶ್ರೀಮತಿ ಭಾರತಿ ಡಾಯಸ, ಜಿಲ್ಲಾ ತರಬೇತಿ ಆಯುಕ್ತರು(ಸ್ಕೌಟ್) ಶ್ರೀ ಎ.ವಿ. ರಾಜೇಶ, ಸ್ಥಳೀಯ ಕಾರ್ಯದರ್ಶಿ ಶ್ರೀ ನೂರ ಅಹಮದ್, ಹಿರಿಯ ಸ್ಕೌಟರ್‌ಗಳಾದ ಶ್ರೀ ರಾಮಸಿಂಗ್, ಶ್ರೀ ವೀರೇಶಪ್ಪ ಶ್ರೀ ಕೃಷ್ಣಸ್ವಾಮಿ ಹಾಗೂ ಮಲ್ನಾಡ ಗುಂಪಿನ ರೋವರ್-ರೇಂಜರ್‌ಗಳಿದ್ದರು. ನಂತರ ಸರಕಾರಿ ಪ್ರೌಢಶಾಲೆ, ದುರ್ಗಿಗುಡಿಯ ಸ್ಕೌಟ್ಸ್ ಹಾಗೂ ಕಸ್ತೂರಿಬಾ ಶಾಲೆಯ ಗೈಡ್‌ಗಳು ಜಿಲ್ಲಾ ಪೆರೇಡ್ ಮೈದಾನಕ್ಕೆ ಹೋಗಿ ಅಲ್ಲಿಯ ಪೆರೇಡ್‌ನಲ್ಲಿ ಭಾಗವಹಿಸಿತು.

## 'ಗೀತ ಭಾರತಿ-2016'

ಪ್ರತಿವರ್ಷದಂತೆ ಈ ವರ್ಷವೂ 'ಗೀತ ಭಾರತಿ-2016' ಕಾಯಕ್ರಮವನ್ನು ಮಲ್ನಾಡ್ ಓಪನ್ ಗ್ರೂಪ್ ದಿನಾಂಕ 06-08-2016 ರ ಶನಿವಾರ ಸಂಜೆ 5.30ಕ್ಕೆ ನಗರದ ಕುವೆಂಪು ರಂಗಮಂದಿರದಲ್ಲಿ ಆಯೋಜಿಸಿತ್ತು.

ದಿನಾಂಕ : 06-08-2016 ರ ಬೆಳಗ್ಗೆ ನಡೆದ ಸಂವಾದದಲ್ಲಿ ಈ ಕಾರ್ಯಕ್ರಮದಲ್ಲಿ ಭಾಗವಹಿಸಲು ರಾಜಾಸ್ತಾನದ ಜೈಪುರದಿಂದ ಶಿವಮೊಗ್ಗ ನಗರಕ್ಕೆ ಆಗಮಿಸಿದ್ದ ಮಹಾವೀರ ಚಕ್ರ ಪ್ರಶಸ್ತಿ ಪುರಸ್ಕೃತರಾದ ನಾಯಕ್ ಶ್ರೀ ದಿಗೇಂದ್ರಕುಮಾರ್ ಅವರು ಮಕ್ಕಳ ಅನೇಕ ಪ್ರಶ್ನೆಗಳಿಗೆ ಉತ್ತರ ನಿಡಿದರು. ಈ ಸಂದರ್ಭದಲ್ಲಿ ಮಾತನಾಡಿದ ಅವರು. ಇಡೀ ದೇಶದಲ್ಲಿ ಹಿಂದೂಸ್ತಾನಿಯೊಬ್ಬನ ಕಣಕಣವೂ ದೇಶಭಕ್ತಿಗೆ ಮೀಸಲಿಟ್ಟಿದೆ. ಇದಕ್ಕೆ ಜಾತಿ. ಪಂಥ. ಧರ್ಮದ ಹಂಗಿಲ್ಲ. ದೇಶಕ್ಕೆ ಯಾರೇ ತೊಂದರೆ ಕೊಟ್ಟರೂ ನಮ್ಮ ರಕ್ತ ಕುದಿಯುತ್ತದೆ. ಅದು ಇದೀಗ ಹುಟ್ಟುವ ಮಗುವಿನದ್ದೂ ಆಗಿರಬಹುದು. ಇಗಲೂ ನನ್ನ ಶತ್ರುಗಳಿಗೆ ತಿಳಿದಿದೆ. ಅದಕ್ಕಾಗಿ ನಮ್ಮ ತಂಟೆಗೆ ಬರಲು ಅವರು ಹಿಂದೇಟು ಹಾಕುತ್ತಾರೆ. ಈಗ ಅಂತಹ ಸಂದರ್ಭ ಬಂದರೆ, ಈ ಕೋಬ್ರ ಶತ್ರುಗಳ ರುಂಡ ಚೆಂಡಾಡುತ್ತಾನೆ ಎಂದು ಭಾವುಕರಾಗಿ ನುಡಿದರು.

ಮುಖ್ಯ ಅತಿಥಿಗಳಾಗಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಜಿಲ್ಲಾ ಆಯುಕ್ತರಾದ ಶ್ರೀ ಎಸ್. ಉಮೇಶ ಶಾಸ್ತ್ರಿ, ಮಹಾನಗರ ಪಾಲಿಕೆ ಆಯುಕ್ತೆ ತುಷಾರಮಣಿ, ಜಿಲ್ಲಾ ಸಂಸ್ಥೆಯ ಕಾರ್ಯದರ್ಶಿ ಶ್ರೀ ಕೆ.ಪಿ. ಬಿಂದುಕುಮಾರ್ ಹಾಜರಿದ್ದರು. ಅಧ್ಯಕ್ಷತೆಯನ್ನು ಸಹಾಯಕ ಜಿಲ್ಲಾ ಆಯುಕ್ತರು ಹಾಗೂ ಮಲ್ನಾಡ್ ಓಪನ್ ಗ್ರೂಪ್ ಸಮಿತಿ ಉಪಾಧ್ಯಕ್ಷರಾದ ಶ್ರೀ ಎಸ್.ಟಿ. ಶ್ರೀನಿವಾಸ ವರ್ಮ ವಹಿಸಿದ್ದರು. ಇದೇ ಸಂದರ್ಭದಲ್ಲಿ ನಿವೃತ್ತ ಯೋಧರಾದ ಶ್ರೀ ಪ್ರಕಾಶ ತಿರುಮಲೇಶ, ಶ್ರೀ ಶ್ರೀನಿವಾಸರೆಡ್ಡಿ, ಶ್ರೀ ಚಂದ್ರಶೇಖರ್, ಶ್ರೀ ಉಮೇಶ್ ಬಾಪಟ್, ಶ್ರೀ ರೂಪಕುಮಾರ್ ಹಾಗೂ ದಿ. ಉಮೇಶ ಅವರ ಪತ್ನಿ ವೀಣಾ ಉಮೇಶ ಅವರುಗಳಿಗೆ ಸನ್ಮಾನಿಸಲಾಯಿತು.




ಸಂಜೆ ನಡೆದ 'ಗೀತ ಭಾರತಿ–2016' ರ ಕಾರ್ಯಕ್ರಮದಲ್ಲಿ ಮಹಾವೀರ ಚಕ್ರ ಪ್ರಶಸ್ತಿ ಪುರಸ್ಕೃತರಾದ ನಾಯಕ್ ಶ್ರೀ ದಿಗೇಂದ್ರಕುಮಾರ್ ಅವರು ಅಮರ್ ಜವಾನ್‌ಗೆ ನಮನ ಸಲ್ಲಿಸುವ ಮೂಲಕ ಉದ್ಘಾಟನೆಯನ್ನು ನೆರವೇರಿಸಿದರು. ಕಾರ್ಯಕ್ರಮದಲ್ಲಿ ಶ್ರೀ ಪಿ.ಜಿ.ಆರ್. ಸಿಂಧ್ಯಾ ರಾಜ್ಯ ಮುಖ್ಯ ಆಯುಕ್ತರು ಮಾತನಾಡುತ್ತ ದೇಶಭಕ್ತಿಯನ್ನು ವಿದ್ಯಾರ್ಥಿಗಳಲ್ಲಿ ಹೆಚ್ಚಿಸುವ ಇಂತಹ ಕಾರ್ಯಕ್ರಮವನ್ನು ಆಯೋಜಿಸಿರುವ ಮಲ್ನಾಡ್ ಓಪನ್ ಗ್ರೂಪ್‌ನ ಎಲ್ಲಾ ಸದಸ್ಯರಿಗೆ ವಂದಿಸುತ್ತ ಇಂತಹ ಕಾರ್ಯಕ್ರಮಗಳು ರಾಜ್ಯದೆಲ್ಲೆಡೆ ನಡೆಯಲಿ ಎಂದು ಹಾರೈಸಿದರು. ಜಿಲ್ಲಾ ಆಯುಕ್ತರಾದ ಶ್ರೀ ಎಸ್. ಉಮೇಶಶಾಸ್ತ್ರಿ, ಗೈಡ್ ವಿಭಾಗದ ಜಿಲ್ಲಾಆಯುಕ್ತರಾದ ಶ್ರೀಮತಿ ಎಸ್.ಆರ್. ವಿಜಯಲಕ್ಷ್ಮಿ, ಜಿಲ್ಲಾ ಸಂಸ್ಥೆಯ ಕಾರ್ಯದರ್ಶಿ ಶ್ರೀ ಕೆ.ಪಿ. ಬಿಂದುಕುಮಾರ್ ಮಲ್ನಾಡ್ ಓಪನ್ ಗ್ರೂಪ್‌ನ ಹಿರಿಯ ಸದಸ್ಯರು ಹಾಗೂ ರಾಜ್ಯ ತರಬೇತಿ ಆಯುಕ್ತರಾದ (ಗೈ) ಶ್ರೀಮತಿ ಶ್ಯಾಮಲ್ ಅವರು ಭಾಗವಹಿಸಿದ್ದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಮಲ್ನಾಡ್ ಓಪನ್ ಗ್ರೂಪ್ ಸಮಿತಿ ಅಧ್ಯಕ್ಷರಾದ ಶ್ರೀ ಹೆಚ್. ಪರಮೇಶ್ವರ್ ವಹಿಸಿ ಮಾತನಾಡಿದರು.

ಕಾರ್ಯಕ್ರಮದಲ್ಲಿ ಒಂದುವರೆ ಸಾವಿರಕ್ಕು ಹೆಚ್ಚು ಮಂದಿ ಪೋಷಕರು ಹಾಗು ಸಾರ್ವಜನಿಕರು ಭಾಗವಹಿಸಿದ್ದರು. ಈ ಗೀತ ಗಾಯನ ಕಾರ್ಯಕ್ರಮದಲ್ಲಿ ಈ ಕೆಳಕಂಡ ಶಾಲೆಗಲ 600 ಕ್ಕೂ ಹೆಚ್ಚು ಮಕ್ಕಳು ಭಾಗವಹಿಸಿದ್ದರು.

1) ಮೇರಿ ಇಮ್ಮಾಕ್ಯೂಲೇಟ್ ಹಿರಿಯ ಪ್ರಾಥಮಿಕ ಶಾಲೆ, ಶಿವಮೊಗ್ಗ
2) ಪಿಇಎಸ್ ಪಬ್ಲಿಕ್ ಸ್ಕೂಲ್,
3) ಜ್ಞಾನದೀಪ ಶಾಲೆ
4) ಭಾರತೀಯ ವಿದ್ಯಾಭವನ
5) ಕಸ್ತೂರಾ ಬಾ ಪದವಿಪೂರ್ವ ಕಾಲೇಜು ಪ್ರೌಢಶಾಲಾ ವಿಭಾಗ
6) ಸರಕಾರಿ ಪ್ರೌಢಶಾಲಾ ಮಂಡಘಟ್ಟ
7) ಮಂದಾರಾ ಜ್ಞಾನದಾಯಿನಿ, ಹಣುಪಿನಕಟ್ಟೆ, ಶಿವಮೊಗ್ಗ
8) ಶ್ರೀ ಶಾರದಾದೇವಿ ಅಂಧರ ವಸತಿ ಶಾಲೆ
9) ಮಲ್ನಾಡ್ ಓಪನ್ ಗ್ರೂಪ್ (ಸರಕಾರಿ ಹಿರಿಯ ಪ್ರಾಥಮಿಕ ಶಾಲೆ, ಹೊಸಮನಿ, ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ಚಿಲಕಾದ್ರಿ ಹಳ್ಳಿ ಮತ್ತು ವಿವಿಧ ಶಾಲೆಯ ಸ್ಕೌಟ್ ಗೈಡ್ ಮಕ್ಕಳು ಒಳಗೊಂಡ ಗ್ರೂಪ್ ಸ್ಕೌಟ್–ಗೈಡ್.
10) ಸಂಸ್ಕಾರ ಭಾರತಿ ಶಿವಮೊಗ್ಗ



## ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ ಶ್ರೀ ದಿಗೇಂದ್ರ ಕುಮಾರ್ ರವರ ಕಿರುಪರಿಚಯ

ಶ್ರೀ ದಿಗೇಂದ್ರ ಕುಮಾರ್ ಅಲಿಯಾಸ್ ಕೋಬ್ರಾ 3 ಜುಲೈ 1969ನೇ ಇಸವಿಯಲ್ಲಿ ರಾಜಾಸ್ಥಾನದ ಸಿಕಾರ್ ಜಿಲ್ಲೆಯ ಜಲ್ವಾರ ಗ್ರಾಮದಲ್ಲಿ ಶ್ರೀ ಶಿವದಾಸ್ ಸಿಂಗ್ ಪರಸ್‌ಪಾಲ್ ಕುಟುಂಬದಲ್ಲಿ ಜನಿಸಿದರು. ಅವರ ತಾಯಿಯ ಹೆಸರು ರಾಜ್‌ಕೌರ್, ಅವರ ತಂದೆಯವರು ಆರ್ಯ ಸಮಾಜದ ಅನುಯಾಯಿಯಾಗಿದ್ದು, 1947ರ ಭಾರತ ಪಾಕಿಸ್ಥಾನ ಯುದ್ಧದಲ್ಲಿ ಭಾಗವಹಿಸಿ ಗಾಯಗೊಂಡಿದ್ದರು. ಶ್ರೀಯುತರಿಗೆ ಒಬ್ಬಳು ಪುತ್ರಿ (ಸಮಿತ) ಮತ್ತು ಇಬ್ಬರು ಗಂಡು ಮಕ್ಕಳು (ಜಪೇಂದರ್ ಮತ್ತು ಮಹಾವೀರ್). ಮಹಾವೀರ್ ರವರು ರಾಷ್ಟ್ರೀಯ ಬ್ಯಾಸ್ಕೆಟ್‌ಬಾಲ್ ಆಟಗಾರರು, ಜಪೇಂದರ್ ರವರು ದೆಹಲಿ ತಾಂತ್ರಿಕ ಮಹಾವಿದ್ಯಾಲಯದಲ್ಲಿ ಓದುತ್ತಿದ್ದಾರೆ, ಪುತ್ರಿ ಸಮಿತ ರಾಷ್ಟ್ರೀಯ ಕಬಡ್ಡಿ ಆಟಗಾರರಾಗಿದ್ದಾರೆ.

ಶ್ರೀ ದಿಗೇಂದ್ರರವರು ಭಾರತೀಯ ಸೈನ್ಯದ ರಜಪುತಾನ ರೈಫಲ್ಸ್‌ನ 2ನೇ ಬಟಾಲಿಯನ್ ಸೇರಿದರು. 1987ರಲ್ಲಿ ಶ್ರೀ ಲಂಕಾದಲ್ಲಿ ನಡೆದ ಆಪರೇಷನ್ ಪವನ್‌ನಲ್ಲಿ ಭಾಗವಹಿಸಿದ್ದರು. ಅವರ ತಂಡಕ್ಕೆ ಎಲ್‌ಟಿಟಿಇ ವಶದಲ್ಲಿದ್ದ 36 ಸೈನಿಕರನ್ನು ಬಿಡಿಸಿಕೊಂಡು ಬರುವ ಜವಾಬ್ದಾರಿಯನ್ನು ವಹಿಸಲಾಗಿತ್ತು. ಶ್ರೀ ಕುಮಾರ್ ರವರು ಒಬ್ಬರೇ 50 ಕೆ.ಜಿ. ಮದ್ದುಗುಂಡು ತೆಗೆದುಕೊಂಡು ಹೋಗಿ ಅಲ್ಲಿದ್ದ ಶತ್ರು ಬಂಕರ್‌ಗಳನ್ನು ಧ್ವಂಸ ಮಾಡಿ 72 ಗಂಟೆ ಸೆರೆಯಲ್ಲಿದ್ದ ಭಾರತೀಯ ಸೈನಿಕರನ್ನು ಬಿಡಿಸಿಕೊಂಡು ಬಂದರು.

ಇನ್ನು ಕಾರ್ಗಿಲ್ ಯುದ್ಧದಲ್ಲಿ ಶ್ರೀಯುತರು ಇದ್ದಂತಹ 2ನೇ ಬೆಟಾಲಿಯನ್ ರಜಪುತಾನ ರೈಫಲ್ಸ್‌ನ ಮುಖ್ಯಸ್ಥ ಮೇಜರ್ ವಿವೇಕ್ ಗುಪ್ತ ತಂಡಕ್ಕೆ ಡ್ರಾಸ್ ವಿಭಾಗದ ತೋಲೋಲಿಂಗ್ ಬೆಟ್ಟದ 15000 ಅಡಿ ಎತ್ತರದ ಪಾಯಿಂಟ್ 4590ನ್ನು ಮರು ವಶಪಡಿಸಿಕೊಳ್ಳಲು ಸೂಚಿಸಲಾಯಿತು.

ಈ ಸಂದರ್ಭದಲ್ಲಿ ಕುಮಾರ್ ರವರು ಲೈಟ್ ಮೆಷಿನ್‌ಗನ್ ತಂಡದಲ್ಲಿದ್ದರು. ಇವರಲ್ಲದೆ ಮೇಜರ್ ವಿವೇಕ್ ಗುಪ್ತ, ಸುಬೇದಾರ್ ಬನ್‌ವರ್‌ಲಾಲ್ ಭಕಾರ, ಸುಬೇದಾರ್ ಸುರೇಂದ್ರ ಸಿಂಗ್ ರಾಥೋಡ್, ಲಾನ್ಸ್ ನಾಯಕ್ ಜಸ್ವೀರ್ ಸಿಂಗ್, ನಾಯಕ್ ಸುರೇಂದ್ರ, ನಾಯಕ್ ಚಮನ್ ಸಿಂಗ್ ತೆವಾಟಿಯಾ, ಲಾನ್ಸ್ ನಾಯಕ್ ಬಚ್ಚನ್ ಸಿಂಗ್, ಸಿಎಂಹೆಚ್ ಜಸ್ವೀರ್‌ಸಿಂಗ್ ಮತ್ತು ಹವಾಲ್ದಾರ್ ಸುಲ್ತಾನ್ ಸಿಂಗ್ ನರ್ವಾರ್,

ಪಾಕಿಸ್ತಾನ ಸೈನ್ಯ ತೋಲೋಲಿಮಗ್ ಮೇಲೆ 11 ಬಂಕರ್ ನಿರ್ಮಿಸಿತ್ತು. ಕುಮಾರ್ ರವರು ಮೊದಲ ಮತ್ತು ಕೊನೆಯ ಬಂಕರ್ ನಾಶಪಡಿಸಬೇಕಿತ್ತು, ಉಳಿದವರು ಉಳಿದ 9 ಬಂಕರ್ ನಾಶಪಡಿಸಬೇಕಿತ್ತು. 13ನೇ ಜೂನ್ 1999ರಂದು ಈ ತಂಡವು ಮುನ್ನುಗ್ಗುತ್ತಿರಬೇಕಾದರೆ ಶತ್ರು ಸೈನ್ಯದ ಗುಂಡಿನ ದಾಳಿಗೆ ಸಿಲುಕಿದರು. ಮೇಜರ್ ವಿವೇಕ್ ಗುಪ್ತ ಸೇರಿ 4 ಜನ ದೇಶಕ್ಕಾಗಿ ತಮ್ಮ ಪ್ರಾಣ ತೆತ್ತರು. ಕುಮಾರ್‌ರವರಿಗೆ ಎಡತೋಳಿನಲ್ಲಿ ಗುಂಡು ತಾಕಿತ್ತು. ಆದರೆ ಅವರು ಧೃತಿಗೆಡದೆ ಶತ್ರು ಸೈನ್ಯದ ಮೇಲೆ ತಮ್ಮ ಎಲ್‌ಎಂಜಿಯಲ್ಲಿ ಗುಂಡಿನ ಸುರಿಮಳೆಗೈದರು. ಇವರು ಈ ರೀತಿ ಗುಂಡಿನ ದಾಳಿ ಮಾಡುತ್ತಿರಬೇಕಾದರೆ ಇವರ ಸಹೋದ್ಯೋಗಿಗಳು ಮುಂದುವರೆಯಲು ಸಹಾಯವಾಯಿತು. ಜೊತೆಗೆ ಶತ್ರು ಸೈನ್ಯದೊಂದಿಗೆ ಕೈ-ಕೈ ಮಿಲಾಯಿಸುವಂತಾಯಿತು. ಇವರು ಶೌರ್ಯದಿಂದ ಕಾದಾಡಿ ಸುಮಾರು 48 ಪಾಕಿಸ್ತಾನಿ ಸೈನಿಕರನ್ನು ಹತ ಮಾಡಿದರು. ಒಟ್ಟು 18 ಗುಂಡು ಇವರ ದೇಹವನ್ನು ಹೊಕ್ಕಿದ್ದವು.

ಇವರ ಈ ಅಪ್ರತಿಮ ಶೌರ್ಯಕ್ಕಾಗಿ ರಾಷ್ಟ್ರದ ಯುದ್ಧ ಸಮಯದಲ್ಲಿ ಕೊಡುವ ಎರಡನೇ ಅತ್ಯುನ್ನತ ಪ್ರಶಸ್ತಿಯಾದ 'ಮಹಾವೀರ ಚಕ್ರ' ವನ್ನು ದಿನಾಂಕ 15-08-1999ರಂದು ಭಾರತದ ಘನತೆವೆತ್ತ ರಾಷ್ಟ್ರಪತಿಯವರು ಪ್ರದಾನ ಮಾಡಿದರು.

* ಮಲ್ನಾಡ್ ಓಪನ್ ಗ್ರೂಪ್ ತಂಡವು ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯಲ್ಲಿ ನೊಂದಾಯಿತ ಯುವಕರ ಮತ್ತು ಮಕ್ಕಳ ತಂಡವಾಗಿದೆ.

## ವಿಜಯಪುರ

ದಿನಾಂಕ 15-08-2016 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ವಿಜಯಪುರ, ಜಿಲ್ಲಾ ವತಿಯಿಂದ 70ನೇ ಸ್ವಾತಂತ್ರ್ಯೋತ್ಸವ ಕಾರ್ಯಕ್ರಮವನ್ನು ಜಿಲ್ಲಾ ಸಂಸ್ಥೆ ಕಾರ್ಯಾಲಯದಲ್ಲಿ ನೆರವೇರಿಸಲಾಯಿತು. ಈ ಕಾರ್ಯಕ್ರಮದಲ್ಲಿ ಜಿಲ್ಲಾ ಸಂಸ್ಥೆಯ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಸಿದ್ದಣ್ಣ ಸಕ್ರಿ ಜಿಲ್ಲಾ ಸ್ಥಾನಿಕ ಆಯುಕ್ತರಾದ ಶ್ರೀ ಸಿದ್ಧಲಿಂಗ ಇಂಗಳೇಶ್ವರ, ಶ್ರೀ ಎಸ್.ಎಸ್. ಬೊಮ್ಮನಹಳ್ಳಿ ಜಿಲ್ಲಾ ಸಂಘಟಿಕರಾದ ಶ್ರೀ ಮಲ್ಲೇಶಪ್ಪ ಕೆ.ಟಿ. ಇವರುಗಳು ಉಪಸ್ಥಿತರಿದ್ದರು. ಧ್ವಜಾರೋಹಣದ ನಂತರ ಜಿಲ್ಲಾ ಮುಖ್ಯ ಆಯುಕ್ತರು ಸ್ಕೌಟ್-ಗೈಡ್‌ಗಳು ದೇಶಕ್ಕೆ ಯಾವ ರೀತಿಯ ಸೇವೆಯನ್ನು ಸಲ್ಲಿಸಬೇಕು ಸ್ಕೌಟ್‌ನಿಂದ ಆಗುವ ಪ್ರಯೋಜನಗಳನ್ನು ಮಕ್ಕಳು ಪಡೆದುಕೊಳ್ಳಲು ತಿಳಿಸಿದರು. ಶ್ರೀ ಎಸ್.ಎಸ್. ಬೊಮ್ಮನಹಳ್ಳಿಯವರು ದೇಶದ ಅಭಿಮಾನದ ಬಗ್ಗೆ, ಭಾವೈಕ್ಯತೆಯ ಬಗ್ಗೆ ಮಕ್ಕಳಲ್ಲಿ ಜಾಗೃತಿಯನ್ನು ಬೆಳೆಸಲು ಸ್ಕೌಟ್ ಗೈಡ್ ಸಹಾಯವಾಗುತ್ತದೆ ಎಂದು ತಿಳಿಸಿದರು. ಜಿಲ್ಲಾ ಸಂಘಟಿಕರಾದ ಶ್ರೀ ಮಲ್ಲೇಶಪ್ಪ ಕೆ.ಟಿ. ಇವರು ಸ್ವಾಗತ, ಪ್ರಾಸ್ತಾವಿಕ ನುಡಿ ಹಾಗೂ ವಂದನಾರ್ಪಣೆಯನ್ನು ಸಲ್ಲಿಸಿದರು.

* ಡಾ. ಬಿ.ಆರ್. ಅಂಬೇಡ್ಕರ್ ಜಿಲ್ಲಾ ಕ್ರೀಡಾಂಗಣದಲ್ಲಿ 70ನೇ ಸ್ವಾತಂತ್ರ್ಯೋತ್ಸವ ದಿನಾಚರಣೆಯನ್ನು ಜಿಲ್ಲಾ ಆಡಳಿತ ವಿಜಯಪುರ ಹಾಗು ಸಾರ್ವಜನಿಕ ಶಿಕ್ಷಣ ಇಲಾಖೆ ವತಿಯಿಂದ ನಡೆಸಲಾಯಿತು. ಶ್ರೀ ಎಂ.ಬಿ. ಪಾಟೀಲ ಜಿಲ್ಲಾ ಉಸ್ತುವಾರಿ ಸಚಿವರು ಹಾಗು ಜಲ ಸಂಪನ್ಮೂಲ ಸಚಿವರು ಧ್ವಜಾರೋಹಣವನ್ನು ಮಾಡಿದರು. ಈ ಸಮಯದಲ್ಲಿ ಜಿಲ್ಲೆಯ ವಿವಿಧ ಶಾಲೆಯ ಮಕ್ಕಳು ಹಾಗೂ ಸೆಂಟ್ ಜೋಸೆಫ್ ಆಂಗ್ಲ ಮಾಧ್ಯಮ ಶಾಲೆ, ಜೈನ ಪಬ್ಲಿಕ್ ಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳು ಪಥಸಂಚಲನದಲ್ಲಿ ಭಾಗವಹಿಸಿದ್ದರು ಸ್ಕೌಟ್ ವಿಭಾಗದ ಮಾರ್ಗದರ್ಶಕರಾಗಿ ಶ್ರೀ ಷಢಕ್ಷರದೇವ ಡಿ.ಆರ್. ಹಾಗು ಗೈಡ್ಸ್ ವಿಭಾಗದ ಮಾರ್ಗದರ್ಶಕರಾಗಿ ಶ್ರೀಮತಿ ಗಂಗಾಬಾಯಿ, ರಾ. ಬಿಸನಾಳ ರವರು ವಹಿಸಿದ್ದರು. ಜಿಲ್ಲಾ ಸಂಘಟಿಕರಾದ ಶ್ರೀ ಮಲ್ಲೇಶಪ್ಪ ಕೆ.ಟಿ., ಯವರು ಈ ಸಂದರ್ಭದಲ್ಲಿ ಭಾಗವಹಿಸಿ ಮಕ್ಕಳಿಗೆ ಮಾರ್ಗದರ್ಶನ ನೀಡಿದರು.

## ಚಿತ್ರದುರ್ಗ

ದಿನಾಂಕ 06-08-2016 ರಂದು ರಂದು ಮಾಜಿ ಸಚಿವರು ಹಾಗೂ ರಾಜ್ಯ ಮುಖ್ಯ ಆಯುಕ್ತರು ಆದ ಶ್ರೀ ಪಿ.ಜಿ.ಆರ್. ಸಿಂಧ್ಯಾರವರು ಚಿತ್ರದುರ್ಗ ತಾಲ್ಲೂಕಿನ ತುರುವನೂರು ಹೋಬಳಿ ಹುಣಸೇಕಟ್ಟೆ ಗ್ರಾಮದ ಹಿರಿಯ ಪ್ರಾಥಮಿಕ ಶಾಲೆಯ ಆವರಣದಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್ ಮತ್ತು ಅರಣ್ಯ ಇಲಾಖೆ ವತಿಯಿಂದ ಹಮ್ಮಿಕೊಂಡಿದ್ದ ಸಸಿ ನೆಡುವ ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡುತ್ತಾ ನೀರು-ಅರಣ್ಯ-ಮಣ್ಣನ್ನು ರಕ್ಷಿಸುವ ಮೂಲಕ ದೇಶಕ್ಕೆ ಬೃಹತ್ ಉದ್ಯಮವಾಗಿರುವ ವ್ಯವಸಾಯಕ್ಕೆ ಉತ್ತೇಜನ ನೀಡುವಂತೆ ಯೋಜನೆ "ಕೋಟಿ ವೃಕ್ಷ ಆಂದೋಲನ" ಕಾರ್ಯಕ್ರಮ ಎಂದು "ಅರಣ್ಯ ರಕ್ಷಿಸುವ ಮೂಲ ಉದ್ದೇಶ ಪ್ರಾಣಿ ಸಂಕುಲಕ್ಕೆ ಮರುಜೀವ ನೀಡುವುದು ಎಂಬುದನ್ನು ಮರೆಯಬಾರದು. ಸ್ಕೌಟ್ಸ್-ಗೈಡ್ಸ್‌ನ ಕೆಲಸವೆಂದರೆ ಪರಿಸರ ಸಂರಕ್ಷಣೆ, ಶಿಸ್ತನ್ನು ಕಲಿಯುವುದು, ದೇಶ ಪ್ರೇಮ ಮೈಗೂಡಿಸಿಕೊಳ್ಳುವುದೇ ಆಗಿದೆ ಎಂದರು. ರಾಜ್ಯದಲ್ಲಿ ಸುಮಾರು 50 ಲಕ್ಷ ಮಕ್ಕಳು ಸ್ಕೌಟ್ಸ್-ಗೈಡ್ಸ್‌ಗೆ ಸೇರ್ಪಡೆಯಾಗಿದ್ದಾರೆ. ಸೇವೆಯೇ ನಮ್ಮ ಧರ್ಮ ಎಂಬುದಾಗಿ ಇದರಲ್ಲಿ ತೊಡಗಿರುವುದು ಅತ್ಯಂತ ಹೆಮ್ಮೆಯ ವಿಚಾರ. ಚಳ್ಳಕೆರೆ, ಮೊಳಕಾಲ್ಮೂರು, ಚಿತ್ರದುರ್ಗ ಮಳೆಯಿಂದ ವಂಚಿತವಾದ ಪ್ರದೇಶ. ಇಲ್ಲಿ ನಮ್ಮ ಸಂಸ್ಥೆಯಿಂದ 10 ಸಾವಿರ ಸಸಿ ನೆಡುವ ಕಾರ್ಯಕ್ರಮ ಹಾಕಿಕೊಂಡಿರುವುದು ಅತ್ಯಮತ ಅಭಿಮಾನದ ವಿಚಾರ ಎಂದು ಹೇಳಿದರು.

ಸಂಸದ ಶ್ರೀ ಬಿ.ಎನ್. ಚಂದ್ರಪ್ಪ ಮಾತನಾಡಿ, ಜಿಲ್ಲೆಯ ಹತ್ತು ಸಾವಿರ ಸಸಿ ನೆಡುವ ಗುರಿ ಹೊಂದಿದೆ. ನೆಟ್ಟ ಸಸಿಯನ್ನು ಸಂರಕ್ಷಣೆ ಮಾಡುವುದು ಬಹಳ ಮುಖ್ಯ. ಕಡಿಮೆ ಸಸಿ ನೆಟ್ಟರು ಜವಾಬ್ದಾರಿಯಿಂದ ಕಾಪಾಡಬೇಕು ಎಂದು ಸಲಹೆ ನೀಡಿದರು. ಶಾಸಕ ಶ್ರೀ ಟಿ. ರಘುಮೂರ್ತಿ ಮಾತನಾಡಿ, ಪರಿಸರ ಸಂರಕ್ಷಣೆ ಎಲ್ಲರ ಆದ್ಯ ಕರ್ತವ್ಯವಾಗಿದ್ದು, ಪ್ರತಿಯೊಬ್ಬರು ಪರಿಸರ ಸಂರಕ್ಷಣೆಗೆ ಮುಂದಾಗೇಕು ಎಂದು ಹೇಳಿದರು.

ಡಿ.ಡಿ.ಪಿ.ಐ. ಹಾಗೂ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಂ. ರೇವಣ್ಣಸಿದ್ದಪ್ಪರವರು, ಸ್ಥಳೀಯ ಸಂಸ್ಥೆ ಅಧ್ಯಕ್ಷರಾದ ಡಿ. ಬೋರಪ್ಪ, ಜಿಲ್ಲಾ ಕಾರ್ಯದರ್ಶಿರವರಾದ ಶ್ರೀ ಬಿ.ಎ. ಲಿಂಗಾರೆಡ್ಡಿ, ಸಹಾಯಕ ಆಯುಕ್ತ ಶ್ರೀ ಕೆ.ಎಸ್. ಸುರೇಶ್, ಶ್ರೀ ವೈಬಿ. ಮಹೇಂದ್ರನಾಥ, ಜಿಲ್ಲಾ ಸಹ ಕಾರ್ಯದರ್ಶಿ, ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ಪಿ.ವೈ. ದೇವರಾಜ್ ಪ್ರಸಾದ್, ಜಿಲ್ಲಾ ಪಂಚಾಯ್ತಿ ಮಾಜಿ ಸದಸ್ಯ, ಶ್ರೀ ಬಾಬು ರೆಡ್ಡಿ, ತಾಲ್ಲೂಕು ಪಂಚಾಯ್ತಿ ಸದಸ್ಯ ಶ್ರೀ ಬಿ.ಬಿ. ಬೋರಯ್ಯ ಗ್ರಾಮ ಪಂಚಾಯ್ತಿ, ಅಧ್ಯಕ್ಷೆ ಸತ್ಯಭಾಮ ಉಪಾಧ್ಯಕ್ಷೆ, ಮಂಗಳಮ್ಮ, ಸದಸ್ಯರಾದ ಕೆ. ಸೂರಮ್ಮ, ನಿಂಗಮ್ಮ ಗುರುಮೂರ್ತಿ, ಸ್ಕೌಟ್ಸ್-ಗೈಡ್ಸ್‌ಗಳು ಸ್ಕೌಟರ್ಸ್-ಗೈಡರ್ಸ್‌ಗಳು ಹಾಗೂ ಜಿಲ್ಲಾ ಡಿ.ಓ.ಗಳು ಸ್ಥಳೀಯ ಸಂಸ್ಥೆ ಪದಾಧಿಕಾರಿಗಳು ಹಾಗೂ ಇತರರು ಭಾಗವಹಿಸಿದ್ದರು.

# 70ನೇ ಸ್ವಾತಂತ್ರ್ಯೋತ್ಸವ ಕಾರ್ಯಕ್ರಮದ ಪಥಚಲನದಲ್ಲಿ ಸ್ಕೌಟ್ಸ್-ಗೈಡ್ಸ್ ತಂಡಗಳು ಭಾಗವಹಿಸಿರುವುದು




ಶ್ರೀ ಪ್ರಿಯಾಂಕ ಖರ್ಗೆ, ಮಾನ್ಯ ಪ್ರವಾಸೋದ್ಯಮ ಸಚಿವರು ಸ್ಕೌಟ್ಸ್‌ಗಳಿಂದ ವಂದನೆ ಸ್ವೀಕರಿಸುತ್ತಿರುವುದು




ಶ್ರೀ ಆರ್.ವಿ. ದೇಶಪಾಂಡೆ, ಮಾನ್ಯ ಬೃಹತ್ ಕೈಗಾರಿಕಾ ಸಚಿವರು ಸ್ಕೌಟ್ಸ್‌ಗಳಿಂದ ವಂದನೆ ಸ್ವೀಕರಿಸುತ್ತಿರುವುದು




ಶ್ರೀಮತಿ ಅನಿತಲಕ್ಷ್ಮಿ, ಉಪವಿಭಾಗಾಧಿಕಾರಿಗಳು, ಮಧುಗಿರಿ ಉಪವಿಭಾಗ ಇವರು ಕಬ್ಸ್‌ಗಳಿಂದ ವಂದನೆ ಸ್ವೀಕರಿಸುತ್ತಿರುವುದು



ಬೆಂಗಳೂರು ಉತ್ತರ



ದಕ್ಷಿಣ ಕನ್ನಡ



ಬಳ್ಳಾರಿ



ಶ್ರೀಮತಿ ಸರೋಜ ವಿ. ನಾಯ್ಡು, ಉಪಾಧ್ಯಕ್ಷರು, ಭಾ. ಸ್ಕೌ ಮತ್ತು ಗೈ ಇವರು ದಿನಾಂಕ 09 ಆಗಸ್ಟ್ 2016 ರಂದು 90ನೇ ವರ್ಷಕ್ಕೆ ಪಾದಾರ್ಪಣೆ ಮಾಡಿದರು. ಅವರ ಜೀವನ ಮತ್ತು ಸಾಧನೆ ಕುರಿತಾದ **"ಸ್ನೇಹ ಸ್ಪಂದನ"** ಎಂಬ ಅಭಿನಂದನಾ ಸಂಕಲವನ್ನು ದಿನಾಂಕ 20-08-2016 ರಂದು ಕೊಂಡಜ್ಜಿ ಬಸಪ್ಪ ಸಭಾಂಗಣ, ಶಾಂತಿ ಗೃಹ, ಬೆಂಗಳೂರಿನಲ್ಲಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯಾ ಅವರ ಅಧ್ಯಕ್ಷತೆಯಲ್ಲಿ, ಶ್ರೀ ಯು.ಟಿ. ಖಾದರ್, ಮಾನ್ಯ ಆಹಾರ ಮತ್ತು ನಾಗರಿಕ ಸರಬರಾಜು ಸಚಿವರು ಬಿಡುಗಡೆ ಮಾಡಿದರು.




ಮೈಸೂರು ಜಿಲ್ಲಾ ಸಂಸ್ಥೆ ಆಶ್ರಯದಲ್ಲಿ ಜರುಗಿದ ಸದ್ಭಾವನ ದಿನಾಚರಣೆ ಕಾರ್ಯಕ್ರಮ



ಬಳ್ಳಾರಿ ಜಿಲ್ಲಾ ಸಂಸ್ಥೆ ಆಶ್ರಯದಲ್ಲಿ ಜರುಗಿದ ಸದ್ಭಾವನ ದಿನಾಚರಣೆ ಕಾರ್ಯಕ್ರಮ




ಚಿತ್ರದುರ್ಗ ಜಿಲ್ಲಾ ಸಂಸ್ಥೆ ಆಶ್ರಯದಲ್ಲಿ ಜರುಗಿದ ಸದ್ಭಾವನ ದಿನಾಚರಣೆ ಕಾರ್ಯಕ್ರಮ




ಚಿಕ್ಕಮಗಳೂರು ಜಿಲ್ಲಾ ಸಂಸ್ಥೆ ಆಶ್ರಯದಲ್ಲಿ ಜರುಗಿದ ಸದ್ಭಾವನ ದಿನಾಚರಣೆ ಕಾರ್ಯಕ್ರಮ



ಗದಗ ಜಿಲ್ಲಾ ಸಂಸ್ಥೆ ಆಶ್ರಯದಲ್ಲಿ ಜರುಗಿದ ಸದ್ಭಾವನ ದಿನಾಚರಣೆ ಅಂಗವಾಗಿ ಸ್ಕೌಟ್ಸ್-ಗೈಡ್ಸ್‌ಗಳು ಪ್ರತಿಜ್ಞೆ ಸ್ವೀಕರಿಸುತ್ತಿರುವುದು



State Level Mapping & Star Gazing Course
at STC Doddaballapura on 24th to 28th July 2016



State Level Basic Course for Rover Scout Leaders
at STC Doddaballapura on 22nd to 28th July 2016



State Level Advanced Course for Cub Masters
at STC Doddaballapura on 22nd to 28th July 2016



Basic Course for Scout Master held at S.T.C.
Doddaballapur for the Teachers of
Murarji Desai Residential School



State Level Basic Course For Flock Leaders
at STC Doddaballapura on 22nd to 28th July 2016



State Level Advanced Course for Guide Captains
at STC Doddaballapura on 22nd to 28th July 2016



ದಿನಾಂಕ 08 ಆಗಸ್ಟ್ 2016ರಂದು ಶಿವಮೊಗ್ಗ ಜಿಲ್ಲೆ ಭದ್ರಾವತಿಯಲ್ಲಿ
ಜರುಗಿದ ಮನಶ್ಚೇತನ ಶಿಬಿರದ ಕಾರ್ಯಕ್ರಮ



State Level Rover Scout Leader Basic Course
held at Dr. V.S. Acharya, Dist. Training Centre, Udupi
on 04 to 10 August 2016

Regd. as News Paper (Magazine) RNI No : 13348/1959. Postal Regd. No. KA/BGGPO/2580/2015-17
Permitted to Post under WPP System Vide No.: WPP-340
Posted at: Bengaluru PSO, Mysore Road, Bengaluru-26 on 28 & 30 every Month (No. of Pages : 08+32 = 40)





Sri B.N. Manjunath Reddy, Mayor of B.B.M.P Presenting the Prizes to the Scouts & Guides
Smt. S.P. Hemalatha, Deputy Mayor, Dr. M.R. Jayaram and others are seen





Sri B.N. Manjunath Reddy, Mayor of B.B.M.P Presenting the Prizes to Students of B.B.M.P School.
Sri R.S. Sathyanarayana, M. Anand are also seen and the view of gathering of
Corporators, Invites, Scouts & Guides



Scouts & Guides of Dakshina Kannada who Particinated in the 8th International Jamboore
held in England fro

27.Smt. B.D. Shantha
Leader Trainer(G)
Asst. State Commissioner (Guides)
For Publication
Bharat Scouts and Guides, Karnataka
# 121/1A, 2nd Cross, Varthur Road
Nagavarapalya, C.V. Raman Nagar
Bangalore-560093



If not delivered, please return to :
**THE EDITOR, Karnataka Scout & Guide**
State Headquarters, Shanthi Gruha
#39, Palace Road, Bengaluru - 560 001
Ph.: 080-22260017
e-mail.: shq@bsgkarnataka.org
editor@bsgkarnataka.org
www.bsgkarnataka.org

**Published by : The Bharat Scouts & Guides, Karnataka, State Headquarters**
**Shanthi Gruha,** #39, Palace Road, Bengaluru - 560 001. **Publisher & Editor : Siddaiah,** IAS (Retd.)
**Printed by : L. Lingappa, M.D. at Sathyasri Printers Pvt. Ltd.,** 16/1, 3rd Cross, 2nd Main, Kasturiba Nagar, Mysore Road, Bengaluru-26